*Sanctioned as a Text Book as per D. P. I.'s No ...-86 (c)-900-c of 16-...-1949*

DHAR...

ಕರ್ನಾಟ ಕವಿಚೈತ್ರವನಚೂತನಾದ

# 'ಲಕ್ಷ್ಮೀಶ'ನ

# ಚಂದ್ರಹಾಸ


ಸಂಪಾದಕರು:

**ಪ್ರೊ. ದ. ರಾ. ಬೇಂದ್ರೆ**

ಎಂ. ಎ.


೧—೦—೦




**ಮನೋಹರ ಗ್ರಂಥ ಭಾಂಡಾರ**

**— ಧಾರವಾಡ —**

ಪ್ರಕಾಶಕರು :

**ದ. ಬಾ. ಕುಲಕರ್ಣಿ**

ಮನೋಹರ ಗ್ರಂಥ ಭಾಂಡಾರ

ಧಾರವಾಡ

*Special paper quota for Text Book 65-32476-III of 21-5-48*
*(Paper Controller, Bombay)*

ಜೂನ್ ೧೯೪೯, ೧ನೆಯ ಆವೃತ್ತಿ ಜೂನ್ ೧೯೫೨, ೨ನೆಯ ಆವೃತ್ತಿ

ಮುದ್ರಕರು :

**ಎಸ್. ಎಮ್. ಕುಲಕರ್ಣಿ**

ಲಲಿತ ಮುದ್ರಣಾಲಯ, ಧಾರವಾಡ

# ಪ್ರಕಾಶಕರ ಅರಿಕೆ

೧೯೩೯–೪೦ ರಲ್ಲಿ ಮುಂಬೈ ವಿಶ್ವವಿದ್ಯಾನಿಲಯದವರು 'ಇಂಟರ-ಮಿಡಿಯೇಟ್' ವರ್ಗದ ಕನ್ನಡ ಪದ್ಯ–ಪಠ್ಯ ಭಾಗವೆಂದು ಲಕ್ಷ್ಮೀಶ ಕವಿಯ ಜೈಮಿನಿ ಭಾರತದೊಳಗಿನ ಚಂದ್ರಹಾಸ ಆಖ್ಯಾನವನ್ನೊಳಗೊಂಡ ೨೮–೩೨ ಸಂಧಿಯೊಳಗಿನ ಪದ್ಯಗಳನ್ನು ಗೊತ್ತುಪಡಿಸಿದ್ದರು. ಮದ್ರಾಸ ವಿಶ್ವ ವಿದ್ಯಾನಿಲಯದವರೂ ಇದನ್ನು ಪಠ್ಯವೆಂದು ಮಂಜೂರು ಮಾಡಿದ್ದರು. ಅಲ್ಲದೆ ಮಾಧ್ಯಮಿಕ ಶಾಲೆಗಳಲ್ಲಂತೂ ಎಷ್ಟೋ ವರುಷಗಳಿಂದ ಈ ಭಾಗವು ಕಲಿಸಲ್ಪಡುತ್ತಲೇ ಇದೆ. ಈ ಭಾಗವಷ್ಟೇ ಬೇರೆಯಾಗಿ ಮುದ್ರಿತವಾಗದ್ದರಿಂದ ನಾವು ಇದನ್ನು ಶಾಲೆ–ಕಾಲೇಜುಗಳ ಉಪಯೋಗಾರ್ಥವಾಗಿ ಪ್ರಕಟಿಸುತ್ತಲಿದ್ದೇವೆ.

ನಮ್ಮ ಬಿನ್ನಹವನ್ನು ಮನ್ನಿಸಿ ಕರ್ನಾಟಕದ ಶ್ರೇಷ್ಠ ಕವಿಗಳೂ ವಿದ್ವಾಂಸರೂ ಆದ ಶ್ರೀ ಬೇಂದ್ರೆ ದತ್ತರಾಯರು ಇದರ ಸಂಪಾದನ ಕಾರ್ಯದಲ್ಲಿ ಬಹು ಶ್ರಮವಹಿಸಿ ಪರಿಶುದ್ಧವಾದ ಪ್ರತಿಯನ್ನು ಸಿದ್ಧಗೊಳಿಸಿ ಕೊಟ್ಟುದಕ್ಕಾಗಿ ನಾವು ಅವರಿಗೆ ಎಂದಿಗೂ ಉಪಕೃತರಾಗಿದ್ದೇವೆ.

ಪ್ರತ್ಯೇಕವಾಗಿ ಮುದ್ರಿತವಾದ ಈ ರಸವತ್ತಾದ 'ಚಂದ್ರಹಾಸ' ಕಾವ್ಯ ಭಾಗವನ್ನು ವಿದ್ಯಾರ್ಥಿವೃಂದದವರಲ್ಲದವರೂ ಓದಿ, ಆಸ್ವಾದಿಸಿ ಮೋದಿಸಲೆಂದು ಹಾರೈಸಿದ್ದೇವೆ. ಅದರಲ್ಲೂ ವಿದ್ಯಾಖಾತೆಯವರಂತೂ ಈ ಸರಸತರವಾದ ಕಥಾಭಾಗವನ್ನು ವಿದ್ಯಾರ್ಥಿಗಳಿಗೆ ಎಡೆಬಿಡದೆ ಪಠ್ಯಭಾಗವನ್ನಾಗಿ ನಿಯಮಿಸುವರೆಂದು ನಂಬಿದ್ದೇವೆ.

ಈ ವರುಷ ಧಾರವಾಡ ಜಿಲ್ಹೆಯ ಮಾಧ್ಯಮಿಕ ಶಾಲಾ ಪ್ರಾಧ್ಯಾಪಕ ಸಂಘದವರು ಇದನ್ನು ೬ನೇ ತರಗತಿಗೆ ಪಠ್ಯವನ್ನಾಗಿ ಮಾಡಿದ್ದಕ್ಕೆ ನಾವು ಅವರ ಉಪಕಾರವನ್ನು ನೆನೆಯುತ್ತೇವೆ.

**ಧಾರವಾಡ** **ಮನೋಹರ ಗ್ರಂಥ ಭಾಂಡಾರ**

೧೦–೬–೧೯೪೪

# ಪೀಠಿಕೆ .... .... .... ....

ಜೈಮಿನಿಯ ಸಂಸ್ಕೃತ 'ಅಶ್ವಮೇಧ' ಪುರಾಣಕ್ಕಿಂತಲೂ ಅದರ ಕನ್ನಡ ಅವತಾರವಾದ ಲಕ್ಷ್ಮೀಶನ ಈ ಜೈಮಿನಿ ಭಾರತವು ಸರಸತರವಾದ ಕಾವ್ಯವಾಗಿದೆ ಎಂದು ಎಲ್ಲ ಪಂಡಿತರೂ ಒಪ್ಪುತ್ತಾರೆ. ಈ ಜೈಮಿನಿಭಾರತ ದೊಳಗಿನ ಕಥಾಮಾಲೆಯಲ್ಲಿ ಚಂದ್ರಹಾಸ ಚಾರಿತ್ರ್ಯದ ಪುಷ್ಪವು ಅತಿ ಪರಿ ಮಳವುಳ್ಳದ್ದಾಗಿದೆ. ಈ ಕಾವ್ಯದಲ್ಲಿ ಬಂದ ವೈಷ್ಣವ ಭಕ್ತಮಣಿಮಾಲೆಯಲ್ಲಿ ಚಂದ್ರಹಾಸನು ಮೇರುಮಣಿಯಾಗಿದ್ದಾನೆ. ಲಕ್ಷ್ಮೀಶನು ಈ ಅರಿವಿನಿಂದಲೆ ಈ ಕಾವ್ಯಭಾಗವನ್ನು ನವರಸ ರಮಣೀಯವಾಗಿ ರಚಿಸಿದ್ದಾನೆ. ಶೃಂಗಾರ, ವೀರ, ಕರುಣ, ಅದ್ಭುತ, ಬೀಭತ್ಸ, ಭಯಾನಕಗಳೆಲ್ಲವೂ ಇಲ್ಲಿ ತಮ್ಮ ತಮ್ಮ ಸ್ಥಾನವನ್ನರಿತು ಕೃತಿದೇಹದಲ್ಲಿ ಲಕ್ಷಣಾನ್ವಿತವಾಗಿ ಒಪ್ಪುತ್ತಿವೆ ಜೈಮಿನಿಯ ಕಥಾಕಥನ ಕೌಶಲ್ಯವು ಪರ್ವಪರ್ವಕ್ಕೂ ರಸೋತ್ಕರ್ಷವನ್ನು ತೋರಿಸುವ ಕಬ್ಬಿನಂತಿದ್ದರೆ, ಲಕ್ಷ್ಮೀಶನ ವರ್ಣನಾಸರಣಿಯು ಅಮಂದಸ್ಯಂದಿಯೂ ವಿವಿಧ ಪುಷ್ಪಪರಾಗ ಪರಿಪೂರಿತವೂ ಆದ ಜೇನಿಟ್ಟಿಂತಾಗಿದೆ.

ಜೈಮಿನಿ ಭಾರತದೊಳಗಿನ ಕಥಾನಾಯಕ-ನಾಯಕಿಯರು ಬಹುತರ ವಾಗಿ ತರುಣ-ತರುಣಿಯರಾಗಿದ್ದಾರೆ. ಆದುದರಿಂದ ಅವರ ಜೀವನ ಹಾಗೂ ಭವಿಷ್ಯದಲ್ಲಿ ವಾಚಕರಿಗೆ ಅತೀವ ಕುತೂಹಲವುಂಟಾಗುವದು. ವೃಷಕೇತು, ಸುರಥ, ಸುಧನ್ವ, ಬಭ್ರುವಾಹನ, ಲವ-ಕುಶ ಈ ಎಲ್ಲ ತರುಣ ವೀರರಿಗಿಂತ ಆಬಾಲ್ಯವಾಗಿ ವರ್ಣಿತನಾದ ಚಂದ್ರಹಾಸನು ನಮಗೆ ಹೆಚ್ಚು ಆತ್ಮೀಯನಾಗಿ ತೋರುತ್ತಾನೆ. ಚಂದ್ರಹಾಸನ ಅದ್ಭುತ ಭಾಗ್ಯದಿಂದ ನಮ್ಮ ಮನಸು ಸೂರೆ ಹೋದರೆ ಅವನು ಈಡಾಗುವ ಕಷ್ಟಪರಂಪರೆಗಳಿಂದ ಅದು ಮಾರುಹೋಗುತ್ತದೆ. ಅಂತೂ ನಾವು ಚಂದ್ರಹಾಸನಿಗೆ ಇಬ್ಬಗೆ ಯಾಗಿ ಸೋಲುತ್ತೇವೆ. ತಾಯಿಗೆ ಮಗುವು ಪ್ರೀತಿ, ಕಾರುಣ್ಯಗಳೆರಡರಿಂದ ಇಮ್ಮಡಿ ಮುದ್ದಾಗುವಂತೆ ಚಂದ್ರಹಾಸನು ನಮಗೆ ಪ್ರಿಯನಾಗುತ್ತಾನೆ.

ಸುರಥ-ಸುಧನ್ವರ ವೀರಭಕ್ತಿ, ಬಭ್ರುವಾಹನನ ಜೀವನದ ದುರ್ವಿಲಾಸ, ತಾಮ್ರಧ್ವಜನ ಉಗ್ರಭಕ್ತಿ, ಲವ-ಕುಶರ ಸ್ವಾಭಾವಿಕ ಧೀರತೆ ಇವೆಲ್ಲವೂ ಒಂದೊಂದು ಎಳೆಯಿಂದ ನಮ್ಮ ಮನವನ್ನು ಸೆಳೆದರೆ ಚಂದ್ರಹಾಸನ ಜೀವನವು ನಮ್ಮನ್ನು ಹತ್ತು ಎಳೆಗಳಿಂದ ಸೆಳೆಯುತ್ತದೆ ಚಂದ್ರಹಾಸನ ಜೀವನಕ್ಕಿಂತ ಅದ್ಭುತ ರಮ್ಯ ಕಥೆಯಿಲ್ಲ, ಪ್ರಣಯ ಕಥಾನಕವಿಲ್ಲ, ರೌದ್ರ ಕಾರುಣ್ಯದ ಬೇರೆ ನಿರೂಪಣೆಯಿಲ್ಲ ಹೀಗಾಗಿ ಎಲ್ಲ ರುಚಿಗಳಿಗೂ ತೃಪ್ತಿ ಕೊಡುವ ಸಾಮರ್ಥ್ಯವು ಈ ಕಥೆಯಲ್ಲಿದೆ.

ಚಂದ್ರಹಾಸನ ಕಥೆಯು ಇನ್ನೊಂದು ಬಗೆಯಿಂದ ಬಹಳೀ ಮಹತ್ವದ್ದಾಗಿದೆ. ಭಗವದ್ಗೀತೆಯು ಭಾರತದ ಹೃದಯ ಎಂದಿಟ್ಟುಕೊಂಡರೆ ಚಂದ್ರಹಾಸ ಚಾರಿತ್ರ್ಯವು ಅಂಥ ಹೃದಯದೊಳಗಿನ ಒಂದು ಕಮಲ ಎಂದು ಹೇಳಲೇಬೇಕು. ಭಗವದ್ಗೀತೆಯು 'ಗುಹ್ಯಾತ್ ಗುಹ್ಯತರ ಜ್ಞಾನ' ದಲ್ಲಿ ( ಭ. ಗೀ. ೧೮-೫೯, ೬೦, ೬೨) ಕ್ಷತ್ರಿಯನ ಯುದ್ಧಕರ್ಮಕ್ಕೆ ಸ್ಥಾನವದೆ. ಆದರೆ ಆ ಯುದ್ಧಕರ್ಮವೂ ಕೂಡ ಆಗ ಈಶ್ವರ ಪ್ರೇರಿತವಾಗಿರಲು ಬೇಕು. ಇನ್ನು ಈ 'ಗುಹ್ಯಾತ್ ಗುಹ್ಯತರ ಜ್ಞಾನ' ಕ್ಕಿಂತ ಮೇಲಿನ ಮೆಟ್ಟಲಿನ 'ಗುಹ್ಯತಮ' ಜ್ಞಾನವೊಂದಿದೆ (ಭ. ಗೀ. ೧೮-೬೪, ೬೫, ೬೬) ಅಲ್ಲಿ ಭಗವಂತನು ಹೇಳಿದ್ದೇ ಆದರೆ ಯುದ್ಧದ 'ಕ್ಷಾತ್ರತಾಮಸ' ವನ್ನೂ ಬಿಡಲೇಬೇಕಾಗುವದು ಚಂದ್ರಹಾಸನ ಈ ಸಂದರ್ಭದಲ್ಲಿ ಕೃಷ್ಣನು 'ಬಳಿಕ ಅರ್ಜುನನ ವದನಮಂ ನೋಡಿ ನಸುನಗುತ ನುಡಿದನು. ಏತಕೆ ಸುಮ್ಮನಿಹೆ, ಧರ್ಮಿ ಶಶಿಹಾಸನತಿಬಲಂ, ಪರಿಣತಂ, ಧ್ರುವಸನ್ನಿಭಂ, ತನಗೆ ಭಕ್ತಂ, ಇವನ ಒಸೆದು ನೀನು ಆಲಿಂಗಿಸು' ಎಂದು ಹೇಳಲಾಗಿ-ಅರ್ಜುನನು ತನ್ನ ಭಗವದ್ಗೀತೆಯ ಹಳೆಯ ಪಾಠವನ್ನು ನೆನಿಸಿ " ದೇವ, ನಿಮ್ಮಡಿಗಳುಸಿರಿದುವಲಾ-ತನ್ನ ಮಾರ್ಗಗತಿ ಲೇಸು; ಅನ್ಯರೆಸಗುವಂದದೊಳಾಚರಿಸೆ ಭಯಾವಹಂ ಎಂದು ಭೀಷ್ಮ ಸಂಗರದೊಳೆನಗೆ; ಅವರಿಂದ ಕಾಳಗವೆ ತನಗೆ ಕರ್ತವ್ಯ ಮೀಪದದೊಳಾಲಿಂಗನಮುಚಿತಮಲ್ಲ; ವೃದ್ಧನಹನದರಿಂದಲೀತಂಗೆ ವಂದಿಸುವೆನು " ಎಂದು ಕೃಷ್ಣನಿಗೆ ಹೇಳುವನು.

ಶ್ರೀಕೃಷ್ಣನೆ ಭಗವದ್ಗೀತೆಯಲ್ಲಿ 'ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ | ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ'

( ಭ. ಗೀ. ೧೮-೫೯ ) ಎಂದು ಗೀತೆಯ ತೀರ ಕೊನೆಕೊನೆಗೇ ಉಪದೇಶ ಮಾಡಿದ್ದಾನೆ. ಅಲ್ಲಿ ಯುದ್ಧವು ಈಶ್ವರಪ್ರೇರಿತ ಕರ್ಮ; ಅದು ಭಾರತ-ಕರ್ಮಯೋಗ, ಜೈಮಿನಿಯ ಅಶ್ವಮೇಧವು ಭಕ್ತಿಯೋಗದ ರಹಸ್ಯವನ್ನು ಬೀರಲು ಹೊರಟಿದೆ. ಅದಕ್ಕಾಗಿಯೆ ಮೂಲ ಭಾರತದಲ್ಲಿ ವಿಸ್ತಾರವಾಗಿ ಪ್ರಸ್ತಾವವಾಗದಿದ್ದ ಅಶ್ವಮೇಧದ ಕಥೆಯಲ್ಲಿ ವಿಷ್ಣುಭಕ್ತರ ಪುರಾತನ ದಂತ ಕಥೆಗಳನ್ನೋ ಕಲ್ಪಿತ ಕಥೆಗಳನ್ನೊ ಬೆರಿಸಿ ಭಗವಂತನು ಹೇಳಿದಾಗ ಯುದ್ಧವೇ ವಿಹಿತಕರ್ಮ, ಅದೇ ಭಗವಂತನು ಬೇಡೆಂದಾಗ ಯುದ್ಧವೆ ನಿಷಿದ್ಧಕರ್ಮ ಎಂಬುವ ಭಾಗವತದ ಪಾಠವನ್ನು ಜೈಮಿನಿಭಾರತವು ಹೊಸದಾಗಿ ಕಲಿಸುತ್ತಿದೆ. ಅರ್ಜುನನಿಗೆ ಈ ಪಾಠವನ್ನೇನೊ ಶ್ರೀಕೃಷ್ಣನು ಕಲಿಸಬೇಕಾಯಿತು. ಆದರೆ ಚಂದ್ರಹಾಸನಿಗೆ ಅದು ಸ್ವಭಾವವಾಗಿಯೆ ಗೊತ್ತಿತ್ತು. ಅಂತೆಯೆ ಚಂದ್ರಹಾಸನ ಮಕ್ಕಳು ಅರ್ಜುನನ ಅಶ್ವಮೇಧ ಕುದುರೆಗಳನ್ನು ಕಟ್ಟಿರಲಾಗಿ ಚಂದ್ರಹಾಸನು ಮಾತ್ರ ' ಮಕ್ಕಳಿರ ಕೇಳಿ, ತಾನುಂ ಬಾಲ್ಯದಿಂದ ಬಿಡದೆ ಆಕ್ಕರಿಂ ಚಿತ್ತದೊಳ್ ಧ್ಯಾನಿಸುವ ದೇವನು ಎಂತಕ್ಕೆ ವೈದೋರುವಂ ಪಾರ್ಥನ ಸಹಾಯಕೈತಂದು. ನಾವರಿಯೆವಲ್ಲಿ **ಸಿಕ್ಕದಡೆ ಕೃಷ್ಣದರ್ಶನದ ಪುಣ್ಯಮೆ ಸಾಕು** ಮಿಕ್ಕ ಸುಕೃತದ ಗಸಣಿಯೇಕಿನ್ನು **ಧರ್ಮಾಧ್ವರಕ್ಕೆ** ತಿರುಗುವ ಕುದುರೆಗಳನು ಇಲ್ಲಿ ಕಟ್ಟಿದಡೆ ಪುರುಷಾರ್ಥಮೇನೆಂದನು" ( ೩೨-೪ ) ' ಧರಣಿಯೊಳ್ ಪ್ರತ್ಯಕ್ಷಧರ್ಮದಾಕೃತಿ ಯುಧಿಷ್ಠಿರಭೂಪಂ; ಆತನ ಹಯಂಗಳನು ತಡೆದವರೆ' ( ೩೨-೫ ) ಹೀಗೆ ಕೇಳುವನು, ಹೇಳುವನು. ಚಂದ್ರಹಾಸನಲ್ಲಿನ ಭಗವತ್ ಶರಣ ಜೀವನವು ಸ್ವಧರ್ಮವಾಗಿಯೂ ಸ್ವಭಾವವಾಗಿಯೂ ಬಂದುಬಿಟ್ಟಿದೆ. ಭಾಗವತವು ಯುದ್ಧದ ಕ್ಷಾತ್ರ ಹಿಂಸೆಯನ್ನೂ ಯಜ್ಞದ ವೈದಿಕ ಹಿಂಸೆಯನ್ನೂ ಪರಿಹರಿಸಲು ತೆಗೆದ ಹೊಸ ಯೋಗದ ಮರ್ಮಗಳನ್ನೆ ಜೈಮಿನಿಯ ಈ ಅಶ್ವಮೇಧದಲ್ಲಿ ನಾವು ಕಾಣುವೆವು. ಲಕ್ಷ್ಮೀಶನು ಆ ಹದವನ್ನು ಚನ್ನಾಗಿ ಅರಿತಿದ್ದು " ತನ್ನ ಶರಣರ ಜೀವನವೆ ತನಗೆ ಜೀವನಂ, ತನ್ನ ಶರಣರ್ಬೇರೆ ತಿಳಿಯೆ ತಾಂ ಬೇರಲ್ಲ; ತನ್ನ ಶರಣರ ಹೃದಯ ಕಮಲದೊಳ್ ಪ್ರತ್ಯಕ್ಷಮಾಗಿ ತಾನಿರುತಿರ್ಪೆನು | ನಿನ್ನ ತೆರದಲಿ ಮರುಳರಾರುಂಟು ? ಲೋಕದೊಳ್ನಿನ್ನ ತೆರದಿಂದೀತನೆನಗೆ ಬೇಕಾದವಂ, ನಿನ್ನತೆರನೇನೆಂದು **ಜರೆದು** ಕೌಂತೇಯನಂ ಕೇಳ್ದನಸುರಾರಿ ನಗುತ" ಹೀಗೆ ಅರ್ಜುನನಿಗೂ ಮೇಲ್ಪಂಕ್ತಿಯಾಗಬಹುದಾದ ಪರಮ ವೈಷ್ಣವ ಜೀವ

ನವೊಂದು ಈ ಕಥಾನಕದಲ್ಲಿ ವರ್ಣಿತವಾಗಿದೆ. ಭಾಗವತದ ಪ್ರಲ್ಹಾದ, ಧ್ರುವ, ಈ ಬಾಲ ಭಕ್ತರನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡು ಪುರಾಣಕ್ಕೆ ಸರಿಯಾದ ಅದ್ಭುತ ರಮ್ಯವಾದ ಇನ್ನೊಂದು ಭಕ್ತ ಚಾರಿತ್ರ್ಯವನ್ನು ಕೊಟ್ಟ ಶ್ರೇಯಸ್ಸು ಜೈಮಿನಿಗಿದೆ. ಆದರೆ ಕಾವ್ಯಕ್ಕೆ ಸರಿಯಾಗಿ ನವರಸ ರುಚಿರವಾಗಿ ಮೃದುಪದ ವಿಲಾಸದಿಂದ ಶೋಭಿಸುವ ನಿರುಶ ಮಂಜಳ ಶಬ್ದದಿಂದ ಕಿವಿಗಿಂಪಾಗಿರುವ ಲಲಿತ ಷಟ್ಪದಿಗಳಿಂದೊಡಗೂಡಿದ ಕಾವ್ಯವನ್ನು ರಚಿಸಿರುವ ಕೀರ್ತಿಯು ಲಕ್ಷ್ಮೀಶನಿಗೆ ಸಲ್ಲಬೇಕಾದುದು.

ಈ ಕವಿಯ ಕಾವ್ಯದಿಂದ ಅವನ ಹೆಸರು 'ಲಕ್ಷ್ಮೀಶ' ಅಥವಾ 'ಲಕ್ಷ್ಮೀಪತಿ' ಎಂದಿರಬೇಕೆಂದೂ, ಅವರ ತಂದೆಯು ಹೆಸರು 'ಅಣ್ಣಮಾಂಕ'ನೆಂದೂ, ಅವನಿಗೆ 'ಕರ್ನಾಟ ಕವಿ ಚೈತ್ರವನ ಚೂತ' ಎಂಬ ಬಿರುದನ್ನು ವಿದ್ವತ್ಸಭೆಯು ದಯಪಾಲಿಸಿತ್ತೆಂದೂ ಸಂಸ್ಕೃತ ಜೈಮಿನಿ ಭಾರತದ ಕಥೆಯನ್ನೆ ಅವನು ಕನ್ನಡಿಸಿರುವನೆಂದೂ ತಿಳಿದುಬರುವದು. ಈ ಒಂದೆರಡು ಮಾತನ್ನು ಬಿಟ್ಟರೆ ಅವನ ಚಾರಿತ್ರಿಕ ವಿಷಯವಾವುದೂ ಕಾವ್ಯದಿಂದ ಕಂಡುಬರುವದಿಲ್ಲ. ಅಂತೆಯೆ ಅನೇಕ ಕನ್ನಡ ಕವಿಗಳಂತೆ ಇವನ ಸ್ಥಲ, ಕಾಲ, ಮತ ವಿಷಯಗಳು ದಂತಕತೆಗಳ ಮೂಲಕವಾಗಿಯೂ. ಊಹೆಗಳ ಮೂಲಕವಾಗಿಯೂ ಸಂಶೋಧಕರಿಗೆ ವಿಪುಲಾನ್ನವನ್ನು ಕೊಟ್ಟಿವೆ ಆದರೂ ಸದ್ಯದ ಮಟ್ಟಿಗೆ ಈ ಕೆಲ ಸಂಗತಿಗಳನ್ನು ನಾವು ಒಪ್ಪಿಕೊಳ್ಳಬಹುದು. ಲಕ್ಷ್ಮೀಶನು ಚೆನ್ನಬಸವಪುರಾಣ ಬರೆದ ವಿರೂಪಾಕ್ಷಪಂಡಿತನ ಸಮಕಾಲೀನನಾಗಲಿ, ಪೂರ್ವದವನಾಗಲಿ ಇರಬಹುದೆಂದು ತೋರುತ್ತದೆ. ನಂದೀಮಹಾತ್ಮ್ಯದ ಗೋವಿಂದ ಕವಿಯು 'ಚತುರಾಷ್ಟ್ರ, ರುದ್ರ, **ಲಕ್ಷ್ಮೀಪತಿ,** ಅನಂತರು' ( ನಂದೀಕಾವ್ಯ ಪೀಠಿಕಾ ಸಂಧಿ ೧೫ನೆಯ ಪದ್ಯ ) ಎಂದು ಪ್ರಾರಂಭಿಸುವ ಪದ್ಯದಲ್ಲಿ ಬೇರೆ ಕವಿಗಳೊಡನೆ ಲಕ್ಷ್ಮೀಶನನ್ನು ಸ್ತುತಿಸಿದ್ದಾನೆ * ಈ ಗೋವಿಂದಕವಿಯು ಇಮ್ಮಡಿ ಹಾವಳೀಂದ್ರ ಭೈರವನ ಆಶ್ರಯದಲ್ಲಿದ್ದನೆಂಬುದು ಅದೇ ಕಾವ್ಯದಲ್ಲಿ ೨೫ನೆಯ ಸಂಧಿಯ ೨೮, ೨೯, ೩೦ ಈ ಪದ್ಯಗಳಿಂದ ತಿಳಿದುಬರುತ್ತದೆ. ಈ ಇಮ್ಮಡಿ ಹಾವಳೀಂದ್ರನ ಕಾಲದ ಶಾಸನಗಳಲ್ಲಿ ಒಂದು ಕ್ರಿ. ಶ. ೧೫೪೮, ಇನ್ನೊಂದು ಕ್ರಿ. ಶ. ೧೬೧೭ರದು ಪ್ರಕಟವಾಗಿದೆ. ಆದುದರಿಂದ ಗೋವಿಂದ

* ಕ. ಸಾ. ಪ. ಪತ್ರಿಕೆ ಎಪ್ರಿಲ್ ೧೯೨೯

ಕವಿಯ ಕಾಲವು ಸುಮಾರು ಕ್ರಿ. ಶ. ೧೬೦೦ ಎಂದು ಶ್ರೀ ಡಿ. ಎಲ್. ನರಸಿಂಹಾಚಾರ್ಯರು ( ಕವಿ ಲಕ್ಷ್ಮೀಶ, ಪುಟ ೫೪ ) ನಿರ್ಣಯಿಸಿದ್ದಾರೆ. ಕ್ರಿ. ಶ. ೧೬೦೦ರಲ್ಲಿ ಇರುವ ಒಬ್ಬ ಕವಿಯು ಸ್ತುತಿಸಿದ ಲಕ್ಷ್ಮೀಶನು ಅವನ ಪೂರ್ವದಲ್ಲಿ ಸುಮಾರು ೪೦–೫೦ ವರ್ಷವಾದರೂ ಇರಬಹುದಷ್ಟೇ ? ಕವಿ ಕನಕದಾಸರು ತಮ್ಮ ಮೋಹನತರಂಗಿಣಿಯಲ್ಲಿ ಲಕ್ಷ್ಮೀಶನ ಹೆಸರನ್ನು ಧ್ವನಿತ ಮಾಡಿರುವರೆಂದು ' ಕವಿ ಕನಕದಾಸ 'ದ ಲೇಖಕರಾದ ಶ್ರೀ ಶೇಷಾಚಾರ್ಯ ಕಟ್ಟಿಯವರು ಒಂದು ಸಂದರ್ಭದಲ್ಲಿ ಸೂಚಿಸಿದ್ದರು. ಬೇರೆ ಪ್ರಮಾಣ ಸಿಕ್ಕರೆ ಇದೂ ಗಮನಾರ್ಹವಾದ ವಿಷಯ. ಮೈಸೂರ ಸಂಸ್ಥಾನದೊಳಗಿನ ದೇವನೂರೇ ಲಕ್ಷ್ಮೀಶನ ವಾಸಸ್ಥಳವಾಗಿರಬೇಕು ಎಂದು ಅಲ್ಲಿರುವ ದಂತಕಥೆ, ಐತಿಹ್ಯಗಳ ವಿಪುಲತೆಯಿಂದ ಕಂಡುಬರುವದು. ( ಕವಿ ಲಕ್ಷ್ಮೀಶ ಶ್ರೀ ಮಾಸ್ತಿಯವರ ಲೇಖನ ಪುಟ ೨೬–೨೮ ) ಆದರೆ ಗತಿಸಿದ ಪಂಡಿತ ಕಡಬದ ನಂಜುಂಡಶಾಸ್ತ್ರಿಗಳು ದೇವನೂರು ಎಂಬ ಹೆಸರು ಜೈಮಿನಿ ಭಾರತದ ೨೬ನೆಯ ಸಂಧಿಯ ಕೊನೆಯ ೭೭ನೆಯ ಪದ್ಯದಲ್ಲಿ ಸಿಕ್ಕುವದೆಂದು ತಮ್ಮ ಜೈಮಿನಿ ಭಾರತದ ಪೀಠಿಕೆಯಲ್ಲಿ ಬರದಿದ್ದಾರೆ. ಆದರೆ ನಮಗೆ ದೊರೆತ ಯಾವ ಓಲೆಯ ಪ್ರತಿಗಳಲ್ಲಿಯೂ, ಕೋರಿ ಕಾಗದ ಪ್ರತಿಗಳಲ್ಲಿಯೂ ಈ ಪಾಠವಿಲ್ಲ. ದೇವಪೂರ ಎಂಬ ಅಪಪಾಠವೊಂದಿದೆ. ದೇವನೂರ ಎಂಬ ಪದವನ್ನೇ ಕವಿಗೆ ಉಪಯೋಗಿಸುವದಿದ್ದರೆ ಸ್ಥಳಗಳೇನೋ ಈ ಕಾವ್ಯದಲ್ಲಿ ಹಲಕೆಲವೆಡೆಗಳಲ್ಲಿದ್ದವು. ಏಕೋ–ಏನೋ ದೇವನೂರು ಎಂಬ ಪದವನ್ನು ಕವಿಯು ಎಲ್ಲಿಯೂ ಉಪಯೋಗಿಸಿದಂತೆ ಕಾಣುವದಿಲ್ಲ ಇಷ್ಟರಿಂದ ಕವಿಯು ದೇವನೂರಿನವನು ಅಲ್ಲವೆಂದೇನು ಆಗಲಾರದು. ಮತ ವಿಷಯದಲ್ಲಿಯೂ ಹೀಗೆಯೆ ವಾದ ಸಂಶಯಗಳಿಗೆ ಇಂಬಿದೆ. ಐತಿಹ್ಯವನ್ನು ಲಕ್ಷಿಸಿದರೆ ಅವನು ಯಾವುದೋ ಒಂದು ಪಂಗಡದ ಶ್ರೀ ವೈಷ್ಣವನೆಂದೇ ಒಪ್ಪಲುಬಹುದು. ಆದರೆ ಕಾವ್ಯದಲ್ಲಿ ಪ್ರತಿವಾದಿತವಾದ ಧರ್ಮ ಸರಣಿಯು ಹರಿ-ಹರ ವಿಭೇದವನ್ನು ಮಾಡದ ಪಂಢರಪುರದ ವೈಷ್ಣವ ಪಂಥಕ್ಕೆ ಸರಿಹೋಗುವ ಭಾಗವತ ಸಾಂಪ್ರದಾಯವನ್ನು ಹೋಲುತ್ತದೆ. ಅವನು ಅದ್ವೈತಿಯಾಗಿರಬೇಕು ಎಂಬ ಬಗ್ಗೆ ನಿಸ್ಸಂಶಯುವಾದ ಪ್ರಮಾಣವೆಂದು ಶ್ರೀ. ಪಂಡಿತ ಪೂಜಾರರವರು ತಮ್ಮ ಒಂದು ಲಕ್ಷ್ಮೀಶ ವಿಷಯಕ ಪ್ರಬಂಧದಲ್ಲಿ ಜೈಮಿನಿ ಭಾರತದ ೧೩ನೆಯ ಸಂಧಿಯ ೨೮ನೆಯ ಪದ್ಯವಾದ " ಜೀಯ ಜಗದಂತ

ರಾತ್ಮಕ ಸರ್ವಚೈತನ್ಯ' ವನ್ನು ಉದಹರಿಸಿದ್ದಾರೆ. ಆದರೆ ಈ ಪದ್ಯವು ಕಡಬದ ನಂಜುಂಡ ಶಾಸ್ತ್ರಿಗಳಂತೆ ನಮಗಾದರೂ ಯಾವ ಓಲೆಯ ಪ್ರತಿಗಳ ಲ್ಲಿಯೂ ಸಿಕ್ಕಲಿಲ್ಲ. ಅದ್ವೈತ ಪ್ರೀತಿಯುಳ್ಳವರಾರೋ ತೀರ ಇತ್ತೀಚಿನ ಪ್ರತಿಗಳಲ್ಲಿ ಇದನ್ನು ರಚಿಸಿ ಸೇರಿಸಿರಬೇಕು. ಇಂತು ಸ್ಥಲ, ಕಾಲ, ಮತ ವಿಷಯಗಳು ಸಂಶಯಕ್ಕೆ ಆಸ್ಪದವನ್ನುಂಟು ಮಾಡುತ್ತಿದ್ದರೂ ಕವಿಯ ಕಾವ್ಯ ರಸಾಸ್ವಾದನೆಯಲ್ಲಿ ಸಹೃದಯರಿಗೆ ಯಾವ ಬಾಧೆಯೂ ಇದರಿಂದ ಬರುವಂ ತಿಲ್ಲ. ಚಾರಿತ್ರಕ ವಿಷಯಗಳು ನಿಸ್ಸಂಶಯವಾಗಿ ತಿಳಿದರೆ ಕಾವ್ಯದೊಳಗಿನ ಹಲ ಕೆಲವು ಪದ್ಯಗಳಿಗೆ ಶ್ರೀ. ಗೋವಿಂದ ಪೈಗಳವರು ತಮ್ಮ ಪ್ರಬಂಧದಲ್ಲಿ (ಕವಿ ಲಕ್ಷ್ಮೀಶ ಗ್ರಂಥದಲ್ಲಿ) ಬರೆದಿರುವಂತೆ ಅನೇಕ ಕುತೂಹಲಜನಕ ಧ್ವನಿಗಳು ಹುಟ್ಟಲುಬಹುದು. ಕವಿಯು ಒಂದು ವೇಳೆ ವಿಜಯನಗರದ ರಾಜನಾದ ಶ್ರೀ. ಹರಿಹರನ ಸಮಕಾಲೀನನೂ ಆಗಬಹುದು. ಆದರೆ ಈ 'ಬಹುದಿ'ನ ಮಾರ್ಗವು ಎಷ್ಟು ರಂಜಕವೋ ಅಷ್ಟೇ ತೊಡಕಿನದು. ಈ 'ಬಹುದಿ'ನ ಊಹೆಗಳನ್ನು ಬಿಟ್ಟರೂ ಪ್ರಸ್ತುತ ಕಾವ್ಯಭಾಗವಾದ ಚಂದ್ರ ಹಾಸನ ಚರಿತ್ರೆಯ ರಮಣೀಯತೆಗೆ ಯಾವ ಕುಂದೂ ತಟ್ಟುವಂತಿಲ್ಲ. ಎಲ್ಲಿಯೂ ಕವಿಯ ಸರಸ ಷಟ್ಪದಿಗಳ ಝೇಂಕಾರಕ್ಕೆ ತಡೆಯುಂಟಾಗಿಲ್ಲ. ಅವನ ರಸಿಕತೆ ಕುಂದಿಲ್ಲ. ಅವನ ಊಹಾ-ವಿಲಾಸಗಳು ಸಂಕೋಚಗೊಂ ಡಿಲ್ಲ. ವಿಷಯೆಯ ವಿಷಯಾನುಭವವೆ ಇರಲಿ, ದುಷ್ಟಬುದ್ಧಿಯ ಶೋಕವೆ ಇರಲಿ, ಚಂದ್ರಹಾಸನ ಬಾಲಲೀಲೆಯೋ, ಬೇಡರ ಬೇಟೆಯ ವರ್ಣನೆಯೋ, ವಿಷಯೆಯ ಸಖಿಗಳ ಸಂಭ್ರಮವೋ, ಎಲ್ಲೆಲ್ಲಿಯೂ ಲಕ್ಷ್ಮೀಶನ ನಾದಲೀಲಾ ಲೀನವಾದ ವೀಣೆಯು ಸರಸ್ವತಿಯ ವೀಣೆಯಂತೆ ನಮ್ಮನ್ನು ರಸಪರವಶ ರನ್ನಾಗಿ ಮಾಡುವದು. ಇಂಥ ಕಾವ್ಯ ತಿಳಿಯಲು ಕಿವಿ ಬೇಕು, ಹೃದಯ ಬೇಕು. ಲಕ್ಷ್ಮೀಶನಂಥ ಸಿದ್ಧ ಕವಿಗಳು ಕಿವಿಯಿಂದ ಸೇರಿ ಹೃದಯವನ್ನು ಸೂರೆಗೊಳ್ಳುವದರಲ್ಲಿ ಅತಿ ನಿಪುಣರಾಗಿರುವರು. ಲಕ್ಷ್ಮೀಶನ ಶೈಲಿಯ ಪಾಕವು ಪಂಡಿತ ಪಾಮರರಿಬ್ಬರಿಗೂ ರುಚಿಕಟ್ಟಾಗಿ ತೋರುವಂತಹದಿರುವ ದರಿಂದ ಈ ಕಾವ್ಯಕ್ಕೆ ಇನ್ನೊಂದಿಷ್ಟು ಕಳೆಯೇರುವದು.

ಲಕ್ಷ್ಮೀಶನ ಜೈಮಿನಿಭಾರತದೊಳಗಿನ ಈ ಕಾವ್ಯ ಭಾಗವನ್ನು ಮುದ್ರಣ ಕ್ಕಾಗಿ ಸಿದ್ಧಪಡಿಸುವಾಗ ನಾವು ನಾಲ್ಕೈದು ಓಲೆಯ ಗರಿ ಹಾಗು ಕೋರಿ

ಕಾಗದದ ಪ್ರತಿಗಳ ಸಹಾಯದಿಂದ ಎಲ್ಲ ಪಾಠಗಳನ್ನು ಸಂಶೋಧನಪೂರ್ವಕ ವಾಗಿ ಶುದ್ಧಗೊಳಿಸಿದ್ದೇವೆ. ಪಾಠಗಳನ್ನಾರಿಸುವಾಗ ಅತಿ ಗ್ರಾಮ್ಯವನ್ನೂ, ಉತ್ತರಕರ್ನಾಟಕದ ರೂಢಿಯ ಅತಿ ಸಂಸ್ಕಾರವನ್ನೂ ಬಿಟ್ಟುಕೊಟ್ಟು ಲಕ್ಷ್ಮೀ ಶನಿಗೆ ಸರಿಯಾದ ಮಧ್ಯಮಾರ್ಗದ ಹೊಸಗನ್ನಡವನ್ನೆ ಸಾಧುವೆಂದಿಟ್ಟು ಕೊಂಡಿದ್ದೇವೆ. ಅದರಿಂದ ಇದಕ್ಕೆ ಯಾವ ಮೆರಗು ಬಂದಿದೆ ಎಂಬುದನ್ನು ವಾಚಕರು ಪ್ರಚಾರದಲ್ಲಿರುವ ಬೇರೆ ಪಾಠಗಳೊಡನೆ ಹೋಲಿಸಿ ನೋಡಿದರೆ ತಾನೆ ತಿಳಿಯಬಹುದು. ಅದರ ವಿಷಯ ನಾವು ಹೆಚ್ಚು ಹೇಳಬೇಕಾಗಿಲ್ಲ ಅಲ್ಲಲ್ಲಿ ಕಾವ್ಯದ ಶೋಭೆ ಈ ನವೀನ ಪಾಠಗಳಿಂದ ಹೇಗೆ ಹೆಚ್ಚಾಗಿದೆ ಎಂಬು ದನ್ನು ನಾವು ಟಿಪ್ಪಣಿಗಳಲ್ಲಿ ಯಥಾವತ್ತಾಗಿ ತೋರಿಸುವವರಿದ್ದೇವೆ.

ಈ ಕಾವ್ಯದ ಸಂಪಾದನ ಕಾರ್ಯದಲ್ಲಿ ನನ್ನೊಡನೆ ಸಹಕರಿಸಿದ ಗೆಳೆಯ ಚುಳಕಿ ಗೋವಿಂದರಾಯರಿಗೂ ಇದರ ಪ್ರಕಾಶನವನ್ನು ಕೈಕೊಂಡ ಮನೋಹರ ಗ್ರಂಥ ಭಾಂಡಾರದವರಿಗೂ ಈ ಕೆಲಸದ ಶ್ರೇಯಸ್ಸಿದೆ.

ಸಾಧನಕೇರಿ
೧—೬—೩೯

**ದ. ರಾ. ಬೇಂದ್ರೆ**

# ಚಂದ್ರಹಾಸನ ಕಥೆ

ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಸಂಧಿ ೨೮-೩೧ ಪೂರ್ಣ, ಹಾಗು ೩೨ನೆಯ ಸಂಧಿಯಲ್ಲಿ ೨೨ನೆಯ ಪದ್ಯದ ವರೆಗೆ ಚಂದ್ರಹಾಸಾಖ್ಯಾನವಿದೆ. ಆದರ ಮುಂದಿನ ಸಂಧಿಯಲ್ಲಿ ಕೃಷ್ಣಾರ್ಜುನರು ಸಿಂಧು ದೇಶಕ್ಕೆ ಹೋದು ದನ್ನು ಕವಿ ವರ್ಣಿಸಿದ್ದಾನೆ. ದುರ್ಯೋಧನನ ತಂಗಿ ದುಶ್ಶಲೆಯನ್ನು ಸೈಂಧವ ನಿಗೆ ಕೊಟ್ಟಿತ್ತು. ಮಹಾಭಾರತ ಯುದ್ಧದಲ್ಲಿ ಸೈಂಧವನು ಕೊಲ್ಲಲ್ಪಟ್ಟನು. ಗೆದ್ದ ಪಾಂಡವರು ತನ್ನ ಮಗನನ್ನು ಏನು ಮಾಡುವರೋ ಎಂದು ಕೌರವನ ತಂಗಿಯಾದ ದುಶ್ಶಲೆಗೆ (ದುಶ್ಶೀಲೆ?) ಚಿಂತೆ. ಆಕೆ ಕೃಷ್ಣಾರ್ಜುನರಿಗೆ ಶರಣು ಬರುವಳು. ಜಯದ್ರಥ (ಸೈಂಧವ) ನ ಹೆಂಡತಿಯಾದ ದುಶ್ಶೀಲೆ ತನ್ನ ಮಗುವನ್ನು ಅವರಿಗೆ ಒಪ್ಪಿಸುವಳು ಈ ಸಿಂಧುದೇಶದಿಂದ ಕೃಷ್ಣಾ-ರ್ಜುನರು ನೇರವಾಗಿ ಹಸ್ತಿನಾಪುರಕ್ಕೆ ಹೋದರು. ಅಶ್ವಮೇಧದ ಕುದುರೆಯ ತಿರುಗಾಟ ಮುಗಿಯಿತು. ಮೂಲ ಮಹಾಭಾರತದ ಅಶ್ವಮೇಧಿಕಪರ್ವ ದಲ್ಲಿಯೂ ಈ ಕಥೆ ಇದೆ. ಇದರ ಹಿಂದಿನ ಚಂದ್ರಹಾಸನ ಕಥೆ ಮೂಲ ಮಹಾಭಾರತದ್ದಲ್ಲ. ಚಂದ್ರಹಾಸಾಖ್ಯಾನ ಜೊಕ್ಕ ಜೈಮಿನಿ ಭಾರತದ ಕಟ್ಟ ಕೊನೆಯ ಕಥೆ ೩೨ನೆಯ ಸಂಧಿಯ ೬-೧೨ ಪದ್ಯಗಳಲ್ಲಿ ಕುದುರೆ ತಿರುಗಿದ ದೇಶಗಳ ವರದಿಯಿದೆ. ಇದು ಸಂಗ್ರಹರೂಪವಾಗಿ ಕಾವ್ಯದ ಇತಿವೃತ್ತ ವನ್ನೇ ಹೇಳುವುದು.

ಚಂದ್ರಹಾಸನ ಕಥೆಯು ಸಾಲಿಗ್ರಾಮ ಶಿಲೆಯ ಮಹಿಮೆಯ ಕಥೆ ಯೆಂದು ಹೇಳಲಾಗಿದೆ (ಸಂಧಿ ೩೧; ಪ. ೬೮-೬೯). ಸಾಲಿಗ್ರಾಮದ ಕೇವಲ ಸಂಸರ್ಗದಿಂದ ಚಂದ್ರಹಾಸನಿಗೆ ಸಾಮ್ರಾಜ್ಯಪದವಿಯಾಯಿತೆಂದ ಮೇಲೆ 'ಬೇಕೆಂದು ಬಯಸಿ ಶ್ರದ್ಧೆಯಿಂ ಪ್ರತಿದಿನದೊಳರ್ಚಿಸುವ ನರನು ಆವ ಸಿದ್ಧಿಯಂ ಪಡೆದಪನೊ' (ಸಂ. ೩೧; ಪ. ೬೮). ಇದು ವೀರಶೈವರ ಇಷ್ಟ ಲಿಂಗದ ಮಹಿಮೆಗೆ ಪ್ರತಿಯಾದ ಮಹಿಮಾ ಕಥಾನಕವಿರಲಾರರಷ್ಟೇ? ಪ್ರಭು ಲಿಂಗಲೀಲೆಯಲ್ಲಿಯೂ ಪ್ರಭುವಿನಸುತ್ತಲು ಶಿವಶರಣರ ಏರಿಕೆಯ ಕಥೆಗಳಿವೆ. ಇಲ್ಲಿ ಶ್ರೀಕೃಷ್ಣನ ಸುತ್ತಲು ರಚಿಸಿದ ನವೀನ ಕ್ಷಾತ್ರ ಭಾಗವತರ ಕಥೆಗಳಿವೆ.

---

* ಈ ಲೇಖನವನ್ನು ಮೊದಲು ಪ್ರಕಟಿಸಿದ 'ಪ್ರಬುದ್ಧಕರ್ಣಾಟಕ'ದ ಸಂಪಾದಕರಿಗೆ ವಂದನೆಗಳು. --ದ. ರಾ. ಬೇಂದ್ರೆ

ಪ್ರಭುಲಿಂಗಲೀಲೆ ಸಾಮಾನ್ಯ ಜನರ ಜಿನ್ನು ಕಟ್ಟಿದರೆ, ಇದು ರಾಜಪಕ್ಷದವರಿಗೆ ಭಕ್ತಿಯತ್ತ ಎಳೆಯುತ್ತದೆ (ಸಂಧಿ ೨೮, ಪದ್ಯ ೩೩-೩೪)

ಲಕ್ಷ್ಮೀಶ ತನ್ನ ವಿಶಿಷ್ಟ ಕೌಶಲವನ್ನನುಸರಿಸಿ ಚಂದ್ರಹಾಸನ ರಾಜ್ಯ-ದತ್ತ ಕುದುರೆಯನ್ನು ಹೊರಳಿಸುವ ಪೂರ್ವದಲ್ಲಿ ಮಾಡಿದ ಸೃಷ್ಟಿವರ್ಣನೆಯಲ್ಲಿ ಬರಲಿರುವ ಕಥೆಯನ್ನೂ, ಅದನ್ನು ದಾಟುವದು ಸಾಧ್ಯ ಎಂಬ ಸೂಚನೆಯನ್ನೂ ಕೊಡುತ್ತಾನೆ ಈ ವ್ಯಂಜನೆಯ ರೀತಿ ಇಮ್ಮುಖವಾಗಿದೆ. ಅರ್ಜುನನ ಹೃದಯದಲ್ಲಿ ಇನ್ನೂ ಕ್ಷಾತ್ರತಾಮಸದ ಸಕ್ರಪ್ರ ಅಡಗಿಕೊಂಡಿದೆ. ಆದರೆ ಅದನ್ನು ದಾಟಿಸಲು ಶ್ರೀಕೃಷ್ಣ ಸಹಾಯ ಮಾಡುತ್ತಾನೆ ಎಂಬ ಸೂಚನೆ ಮೊದಲನೆಯದು ಆದರ ಅದಕ್ಕೂ ಸಮೀಪದ ಸೂಚನೆ ಚಂದ್ರ-ಹಾಸಾಖ್ಯಾನದಲ್ಲಿಯೇ ಇದೆ ಚಂದ್ರಹಾಸನ ಜೀವನದಲ್ಲಿ ದುಷ್ಟಬುದ್ಧಿಯು ಮೊಸಳೆಯನ್ನಡಗಿಸಿಕೊಂಡ ಮಡುವಿನ ತೀರಸೀರಿನಂತಿದೆ ಈ ಗಂಡಾಂತರವನ್ನು ಚಂದ್ರಹಾಸನು ಶ್ರೀಕೃಷ್ಣನ ಕೃಪೆಯಿಂದ ದಾಟುವನು. ಈ ವ್ಯಂಜನೆಯ ಸಾಮ್ಯ ಕಾಲ್ಪನಿಕವಲ್ಲ ಸಂಧಿ ೨೭ ಪದ್ಯ ೫೬ ಸಾಲು ೪-೫-೬ ಗಳನ್ನು ಸಂಧಿ ೨೮ ಪದ್ಯ ೨೮ ಸಾಲು ೧-೨-೩ ಇವುಗಳೊಂದಿಗೆ ತುಲನೆಮಾಡಿ ನೋಡಬೇಕು ದುಷ್ಟಬುದ್ಧಿಯನ್ನು ಮೊಸಳೆಗಳುಳ್ಳ ಮಡುವಿಗ ಹೋಲಿಸಿದ್ದು ಅತಿ ಉಚಿತವಾಗಿದೆ. ನೋಡಿ ಸಂಧಿ ೨೯; ಪದ್ಯ ೨೪

೨೮ನೆಯ ಸಂಧಿಯ ಪ್ರಾರಂಭದ ಋತುಮಾನ ವರ್ಣನೆಯಲ್ಲಿ ವ್ಯಂಜನೆಯಿಂದ ಚಂದ್ರಹಾಸಾಖ್ಯಾನದಲ್ಲಿ ಶೃಂಗಾರ ವರ್ಣನೆ ಬರುವುದೆಂದೂ, ಒಬ್ಬ ಪರದೇಶಿ ಮಗುವಿನ ಕಥೆ ಬರುವುದೆಂದೂ, ಒಬ್ಬ ಶಾಂತ ಸ್ವಭಾವದವನಿಂದ ಒಬ್ಬ ಪ್ರತಾಪಿಯ ತೇಜ ತಣ್ಣಗಾಗುವುದೆಂದೂ ಕವಿ ಸೂಚಿಸಿದ್ದಾನೆ. ವಿಷಯೆಯ ಪ್ರಸಂಗ, ಚಂದ್ರಹಾಸನ ಬಾಲ್ಯ, ದುಷ್ಟಬುದ್ಧಿಯ ತೇಜೋಭಂಗ—ಇವೇ ಅವು ಎಂದು ಬೇರೆ ಹೇಳಬೇಕಾಗಿಲ್ಲ ನೋಡಿ. ಸಂಧಿ ೨೯ ಪದ್ಯ ೨.೩.೪.೫. ಲಕ್ಷ್ಮೀಶನು ಹೇಮಂತಶಿಶಿರದ ವರ್ಣನೆಯ ವ್ಯಾಜದಿಂದ ತನ್ನ ವ್ಯಂಜನಾವಿಧಿ (Suggestive Process) ಯನ್ನು ಸಾಧಿಸುತ್ತಾನೆ. ಲಕ್ಷ್ಮೀಶನ ಕಾವ್ಯಕೌಶಲದ ವಿಶೇಷ ಇದೂ ಒಂದು.

ಚಂದ್ರಹಾಸನ ಕಥಾನಕದ ಇನ್ನೊಂದು ವಿಶೇಷವೆಂದರೆ ಇದರ ಪೂರ್ವದ ಕಥೆಗಳಂತೆಯೇ ಈ ಕಥಾನಕದೊಳಗಿನ ವೇಶ ಪಾತ್ರಗಳ ಹೆಸರು

ಗಳಿಂದ ಸೂಚಿತವಾಗುವ ಒಂದು ನೀತಿ. ಇದು ಭಾಗವತ ಸಂಪ್ರದಾಯದ ಎಲ್ಲ ಕಥೆಗಳಿಗೂ ಅನ್ವಯಿಸುವುದು ಅದೇಕೆ? ರಾಮಾಯಣ ಮಹಾಭಾರತ ಗಳಲ್ಲಿಯೂ ವೇದಗಳ ದಿವ್ಯ ವಾಕ್ಸರಣಿಯಲ್ಲಿಯೂ ನಾಮದ ಗುಹ್ಯಾರ್ಥ ತುಂಬಿರುವುದು ಸಂಪ್ರದಾಯವೇ ಆಗಿದೆ ಉತ್ತಾನಪಾದರಾಜನ ಹೆಂಡಿರು ಸುರಚಿ ಮತ್ತು ಸುನೀತಿ, ಸುರಚಿಯ ಮಗ ಉತ್ತಮ, ಸುನೀತಿಯ ಮಗ ಧ್ರುವ. ರುಚಿಮಾರ್ಗಕ್ಕಿಂತ ನೀತಿಮಾರ್ಗ ಮೇಲು ಎಂಬದು ಈ ನಾಮ ಗಳ ಸಂಕೇತ ಇದನ್ನು ತಿಳಿಯದ ರಾಜನು ಬುಡಮೇಲಾದ ಉತ್ತಾನಪಾದ ನಲ್ಲದೆ ಮತ್ತೇನು? ಚಂದ್ರಹಾಸನ ಕಥೆಯೂ ಭಾಗವತ ಸಂಪ್ರದಾಯವನ್ನು ಅನುಸರಿಸಿಯೇ ಕಟ್ಟಿದುದಾಗಿದೆ ಚಂದ್ರನ ಬಗೆಗೆ ಲಕ್ಷ್ಮೀಶನಿಗೆ ಇರುವ ಪಕ್ಷಪಾತವು ತೀರ ಸ್ಫುಟವಾಗಿದೆ. 'ಲಕ್ಷ್ಮೀರಮಣನ ಆಸ್ಯಚಂದ್ರನು ನಮಗೆ ಆನಂದವನ್ನುಕೊಡಲಿ'ಎಂಬ ಪ್ರಾರ್ಥನೆಯಿಂದ ಜೈಮಿನಿಭಾರತವು ಪ್ರಾರಂಭ ವಾಗುವುದು ಕೃಷ್ಣನ ಕೀರ್ತಿಲತೆಯು ಆಚಂದ್ರಮಿರ್ಪಂತೆ ಕವಿ-ಮತಿಗೆ ಗೋಚರಿಸಿತಂತೆ ಅಂತೆಯೇ ಕೃತಿಗೆ ನಾಯಕನಾದನು ಅಸುರಪುರ ಲಕ್ಷ್ಮೀಶನು ಜೈಮಿನಿಭಾರತದ ಕಥೆಯೇ ಚಂದ್ರವಂಶದ ರಾಜರನ್ನು ಕುರಿತು ಇದ್ದದ್ದು. ಇದರೊಳಗೆ ಅಶ್ವಮೇಧ ಸಂಬಂಧದಿಂದಲೂ ಬಭ್ರುವಾಹನ ಕಥಾವ್ಯಾಜದಿಂದಲೂ ರಾಮಚಂದ್ರನ ಕಥೆಯು ಸೇರಿಕೊಂಡಿತು ಹೀಗಾಗಿ ಲಕ್ಷ್ಮೀಶನ ಕಲ್ಪನೆಗೆ ಚಂದ್ರಭಾವವು ಭಕ್ತಿ ಉದ್ದೀಪಕವಾಗಿದೆ. ಕವಿ-ಸಮಯದಂತೆ ಚಂದ್ರನು ಕಾಮ ಸಹಾಯಕ ಕಾಮನೋ ಪ್ರದ್ಯುಮ್ನನಾಗಿ ಕೃಷ್ಣನ ಮಗನಾಗಿ ಬಂದ. ಅಂದ ಮೇಲೆ ಚಂದ್ರನೂ ವಿಷ್ಣುವಿನ ಬಳಗ ದವನೇ. ಕ್ಷೀರಸಾಗರಸಂಭೂತನಾದ್ದರಿಂದ ಅವನು ಲಕ್ಷ್ಮಿಯ ಸೋದರನೂ ಹೌದು. ಶೈವ ಕಲ್ಪನೆಯಲ್ಲಿ ಚಂದ್ರನು ಒಂದು ಶಿರೋಭೂಷಣ ಮಾತ್ರ. ಆದರೆ ವೈಷ್ಣವ ವಿಚಾರದಲ್ಲಿ ಚಂದ್ರನು ಹೃದಯಕ್ಕೆ ಸಂಬಂಧಿಸಿದವನು ಈ ಆಖ್ಯಾನದ ಮಟ್ಟಿಗೆ ವಿಷಯೆ-ಮದನರು ಬುದ್ಧಿಸುಜಾತರು ಈ ಬುದ್ಧಿಯೇ ರಾಜನ ಅಂಕೆ ತಪ್ಪಿದ್ದರಿಂದ ದುಷ್ಟಬುದ್ಧಿಯಾಯಿತು. ಸಂಸ್ಕೃತ ಜೈಮಿನಿ ಭಾರತದಲ್ಲಿ ದುಷ್ಟಬುದ್ಧಿ ಎಂಬ ಹೆಸರಿಲ್ಲ. ದುಷ್ಟಬುದ್ಧಿಯು ತದ್ಭವ. ಧೃಷ್ಟ ಬುದ್ಧಿಯನ್ನು ಬೆಳೆಸಿದಂತೆ ಧೃಷ್ಟತನವೇ ದುಷ್ಟತನವಾಗುತ್ತದೆ. ಧೃಷ್ಟ ಬುದ್ಧಿಗೆ ಅರಸನಸಿದ್ದವನು ಕುಂತಲಪುರದ ಒಬ್ಬ ಅನಾಮಕ ರಾಜ. ಕುಂತಲ

ಪುರವು ಕೂದಲದ ರಾಜ್ಯ—ತಲೆ, ತಲೆಯೊಳಗಿನ ಯಾವುದೋ ಒಂದು ಅವಿದಿತ ಶಕ್ತಿಯೇ ಅದನ್ನು ಆಳಬೇಕು. ಆದರೆ,

ಆ ನಗರದೊಳ್ ಕುಂತಳೇಶ್ವರಂ ನಿರ್ಮಲ
ಜ್ಞಾನದಿಂ ಗಾಲವನ ಸೂಕ್ತಮಂ ಕೇಳುತೆ ಸ-
ದಾನಂದ ಯೋಗಮಂ ಕೈಕೊಂಡು ದುಷ್ಟಬುದ್ಧಿಗೆ ವಿಚಾರವ-
ನೊಪ್ಪಿಸಿ |
ಧ್ಯಾನಪರನಾಗಿರ್ಪನದರಿಂದ ಪೊಳಲಂ ಪ್ರ
ಧಾನಿ ಪಾಲಿಪನು.... .. .... ... ...........

ಸಂಧಿ ೩೦ ಪದ್ಯ ೪೩.

ಪುರುಷನಿಗೆ ಕೈತಪ್ಪಿ ರಾಜ್ಯ ಪ್ರಧಾನಿಗೆ ನೇರಿತು ಎಂದರೆ ಬುದ್ಧಿ ದುಷ್ಟವಾಗುತ್ತದೆ. (ಪ್ರಧಾನ ಎಂದರೆ ಪ್ರಕೃತಿಗೆ ಹೆಸರು ಸಾಂಖ್ಯದಲ್ಲಿ, ಅದರಲ್ಲಿ ಬುದ್ಧಿ, ಅಹಂಕಾರ ತತ್ವಗಳು ಅಡಕವಾಗುತ್ತವೆ). ಇಂಥ ದುಷ್ಟಬದ್ಧಿಯ ಮಗ ಮದನ ತನ್ನ ಪೂರ್ವ ಕರ್ಮದಿಂದ ವಿಷ್ಣುಭಕ್ತ. ಅವನ ಸಭೆಯಲ್ಲಿ ಕೃಷ್ಣಚರಿತ್ರವನ್ನು ನೊಗನಾಗಿ ರಚಿಸುವ ಭಾವುಕರ ಸಂಗೀತಗೋಷ್ಠಿಯ ಸತ್ಸಂಗ ಪ್ರಸಂಗ ಅವನಿಗೆ ಯಾವಾಗಲೂ ಇತ್ತು. ಇದಲ್ಲದೆ ಅವನು ಶಂಕರ ಪ್ರಿಯ "ಕಂದ ನೀನಚ್ಯುತ ಪರಾಯಣಂ, ಶಿವ ಪೂಜಕಂ" (ಸಂ.೩೧,ಪ೬೦) ಎಂದು ದುಷ್ಟಬುದ್ಧಿಯೇ ತನ್ನ ಮಗನನ್ನು ಕುರಿತು ಪ್ರಲಾಪಿಸುವಾಗ ಹೇಳುತ್ತಾನೆ. ಮದನನು ಹರಿಹರ ವಿಭೇದ ಮಾಡದ ಪರಮ ಭಾಗವತ. ಇನ್ನು ವಿಷಯೆಯೋ,ದೈವಾಯತ್ತವಾಗಿ ವಿಧಿಪ್ರಚೋದನೆಯೆಂದೇ ಎಂಬಂತೆ (ತನ್ನ ಕರ್ಮಪರಿಪಾಕಫಲವಾಗಿಯೂ ಹೌದು) ವಿಷ್ಣುಭಕ್ತನ ಸತಿಯಾದಳು. ವಿಷಯಾಪರ್ಣದ ರೀತಿಯಲ್ಲಿ ಉನ್ನತಿ-ಅವನತಿಯಿದೆ.ಈ ಇಬ್ಬರು ಮಕ್ಕಳ ಪುಣ್ಯದಿಂದಲೇ ದುಷ್ಟಬುದ್ಧಿಯು ತನ್ನ ದುಷ್ಟತನವನ್ನು ಕಳೆದುಕೊಂಡು ಹೋದ ಪ್ರಾಣವನ್ನುಮರಳಿ ಪಡೆದು ಕೃಷ್ಣದರ್ಶನವಾಗುವವರೆಗೂ ಬಾಳಿಯೇ ಇದ್ದ. "ಇಂದಿರಾವಲ್ಲಭನ ದರ್ಶನಕೆ ದುಷ್ಟಬುದ್ಧಿ ನಿಜಸೂನು ಸಹಿತ ಬಂದು ನಿರ್ಧೂತ ಕಿಲ್ಬಿಷನಾದನು' (ಸಂ. ೩೨. ಪ ೧೯.). (ಚಂದ್ರಹಾಸನ ತಂದೆ ಮೇಧಾವಿ, ಅವನ ನಾಕುತಾಯಿ ಮೇಧಾವಿನಿ—ಇದೂ ಅರ್ಥಪೂರ್ಣವಾಗಿದೆ.) ದುಷ್ಟಬುದ್ಧಿ ಮತ್ತು ಮದನನ ಪರಿಕರದಲ್ಲಿಯೂ ತುಂಬ ಭೇದವಿತ್ತು. ಮದನನ ಅರಮನೆಗೂ ಏಳು ಬಾಗಿಲು ಏಳನೆಯ ಬಾಗಿಲಲ್ಲಿ **ವಿವೇಕನೆಂಬವನು**

ಶ್ರದ್ಧಾಯಷ್ಟಿಯನ್ನು ಹಿಡಿದು ದ್ವಾರಪಾಲನ ಮಾಡುತ್ತಾನೆ. ಅವನೇ ಮದನನಿಗೆ ಆಪ್ತಸೇವಕ (ಸಂ. ೩೦ ಪ. ೪೬) ದುಷ್ಟಬುದ್ಧಿಗೋ ಹಿಂಸಾಯಷ್ಟಿ ಹಿಡಿದ **ಕ್ರೋಧ**ನೆಂಬ ದ್ವಾರಪಾಲಕನು ಆಪ್ತಸೇವಕನು. ವಿವೇಕ ಶ್ರದ್ಧಾಯುತವಾದ ಕಾಮವೂ ಉದ್ಧಾರವಾಗುತ್ತದೆ. ಅದು ಈಶ್ವರಾರ್ಪಣ ಬುದ್ಧಿಯಿಂದ ಮೇಲ್ಮೆಯಾಗುತ್ತದೆ. ಹಿಂಸಾ ಕ್ರೋಧಗಳಿಂದ ಕೂಡಿದ ಬುದ್ಧಿ ವಿನಾಶಕ್ಕೆ ಎಳೆಯುತ್ತದೆ. ದುಷ್ಟಬುದ್ಧಿಯೇ ಉದ್ಧಾರವಾದದ್ದು ತಾನು ತನ್ನ ಆತ್ಮವೆಂದು ತಿಳಿದ ಮದನನ ಪ್ರೀತಿಯಿಂದ ಈ ನೀತಿ ಕಥಾಭಾಗವು ಭಗವದ್ಗೀತೆಯ

> ಧ್ಯಾಯತೋ ವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೆ |
> ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಭಿಜಾಯತೇ ||
> ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ |
> ಸ್ಮೃತಿಭ್ರಂಶಾತ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ||
>
> ೨—೬೨,೬೩.

ಎಂಬ ಶ್ಲೋಕಗಳಿಗೆ ಸುಂದರ ಟೀಕೆ ಇದ್ದಂತೆ ಇದೆ.

೨

ಈ ಕಥೆಯು ದೈವವಿಲಾಸವನ್ನು ಹೇಳುವ ಉತ್ತಮ ಕಥೆ. ಜಗತ್ಕಥಾ ಪ್ರಪಂಚದಲ್ಲಿ ಇದು ಸೇರ್ಪಡೆಯಾಗಿರುವುದೆಂದು ಮಾನ್ಯ ವಿಂಟರನಿಝು ಅವರು ತಮ್ಮ ಸಂಸ್ಕೃತಸಾಹಿತ್ಯದ ಇತಿಹಾಸದಲ್ಲಿ ಹೇಳುತ್ತಾರೆ. ಕೇವಲ ದೈವ ಸಹಾಯದಿಂದ ದುಷ್ಟಬುದ್ಧಿಯ ಕುತಂತ್ರಗಳನ್ನೆಲ್ಲ ಸಹಜಲೀಲೆಯಿಂದ ದಾಟಿ ಅರಸನಾಗಲು ಹುಟ್ಟಿದ ಪರದೇಶಿ ಮಗುವಿನ ಕಥೆಯಿದು. ಶೈವಕಥಾನಕಗಳಲ್ಲಿ ನಂಬಿಯಣ್ಣನ ಕಥೆಯ ವಿಲಾಸ ಇನ್ನೊಂದು ಬಗೆಯದಾಗಿದೆ. ಚಂದ್ರಹಾಸನ ಕಥೆ ನಂಬಿಯಣ್ಣನ ಇತಿಹಾಸಕ್ಕಿಂತ ಪ್ರಾಚೀನವಾದುದೋ ಇಲ್ಲವೋ ಹೇಳಲು ಬಾರದು. ಮೊದಲಿನಿಂದ ಕೊನೆಯ ವರೆಗೆ ಈ ಆಖ್ಯಾನದಲ್ಲಿ ವಿಧಿವಿಲಾಸವು ಕಂಡುಬರುವುದು. ಕಷ್ಟದಂತೆ ಕಷ್ಟಪರಿಹಾರವೂ ದೈವಿಕವಾಗಿಯೇ ಬರುವುದು.

> "ಕಾವರಾರ್ ಕೊಲ್ವರಾರ್ ಅಳಿವರಾರ್ ಉಳಿವರಾರ್
> ಭಾವಿಸೊಡೆ ವಿಷ್ಣುಮಾಯಾಮಯಂ ಇದು"

ದುಷ್ಟಬುದ್ಧಿಗೆ ಕೂಡ ಈ ವಿಚಾರ ಹೊಳೆಯದೆ ಹೋಗುವುದಿಲ್ಲ "ಪ್ರೊಸ ತಲಾ ದೈವಕೃತಂ" (ಸಂ ೩೧ ಪ ೫೦), "ಅರಿದರಿಸು ಪರಹಿಂಸೆಯಂ ಮಾಡಿ ಮಾನವಂ ಬಾಳ್ವಪನೆ . ....ದೀಪಮುಂ ಕೆಡಿಸುಪ ಪತಂಗದಂತೆ ಸಮ್ಮುಪಾ- ಯವೆ ನಮಗಪಾಯಮುಂ ತಂದುದು" (ಸಂ. ೩೧ ಪ ೫೩), "ಋಷಿಗಳಾಡಿದ ಮಾತು ಪುಸಿಯದು, ಲೋಕದೋಳ್ ವಿಧಿಲಿಖಿತಮುಂ ನಿವಾರಿಪರುಂಟೆ?" (ಸಂ. ೩೧ ಪ. ೩೫-೩೬). ಇವು ದುಷ್ಟಬುದ್ಧಿಯಾಡಿದ ಮಾತು ಹೀಗಿದ್ದೂ ದುಷ್ಟಬುದ್ಧಿಯು ದೈವದ ವಿರುದ್ಧ ಹೋರಾಡುತ್ತಾನೆ ಸುಬುದ್ಧಿ–ದುರ್ಬುದ್ಧಿ ಗಳ ಭೇದ ಸ್ವಲ್ಪದರಲ್ಲಿದೆ. ಒಂದು ದೈವಾನುಕೂಲವಾಗಿ ಪೌರುಷವನ್ನೆಸಗು ತ್ತದೆ, ಇನ್ನೊಂದು ತನ್ನ ಪೌರುಷದಿಂದ ದೈವವನ್ನು ಸುಳ್ಳುಮಾಡುವ ವಿಫಲ ಪ್ರಯತ್ನದಲ್ಲಿ ತೊಡಗುತ್ತದೆ ಧೃಷ್ಟತೆಯು ದುಷ್ಟತೆಯಾಗುವುದೂ, ಸುಯೋಧನನು ದುರ್ಯೋಧನನಾಗುವುದೂ ಈ ಹಾದಿಯಲ್ಲಿಯೇ.

ವಿಷ್ಣುಭಕ್ತಿಯನ್ನು ಪರಿಪೂರ್ಣವಾಗಿ ಪರಿಪಾಕಗೊಳಿಸುವುದೇ ಈ ಆಖ್ಯಾನದ ವಿಶೇಷ ಉದ್ದೇಶವಾಗಿರುವುದು "ಶತಪತ್ರನಾಭನ ಭಕ್ತಿ ಪ್ರಥ ವಾಗಲಿ ಈತನ ಚರಿತ್ರಮುಂ ಕೇಳ್ದವರ್ಗೆ" ಎಂದು ಹರಿ ವರವನಿತ್ತನಂತೆ ಚಂದ್ರಹಾಸನಿಗೆ (ಸಂ ೩೨ ಪ ೨೨) ದೇವಿಯು ಕೂಡ "ನಿನ್ನ ಚರಿತವ ನೋದಿ ಕೇಳ್ವವರ್ಗೆ ಮಿಗೆ ವರ್ಧಿಪುದು ಮುಕುಂದಾಭಿರತಿ ಮುಂದೆ ಕಲಿ ಯುಗದೊಳ್ ಎನ್ನಾಜ್ಞೆಯಿದು"(ಸಂ.೩೧,ಪ.೭೦). ಚಂದ್ರಹಾಸನು ಕೂಡ ತನ್ನ ಪ್ರಜಾಜನರಿಗೆ "ನೀವೆಲ್ಲರುಂ ಕೃಷ್ಣ ಭಜನೆಗೆಯ್ವುದು ಎಂದು ಸಾರಿದಂ ಬೇಡಿಕೊಳುತೆ" (ಸಂ ೩೧, ಪ. ೭೫) ದೇವಿಯಲ್ಲಿ ಚಂದ್ರಹಾಸ ಬೇಡಿಕೊಂಡ ಮೊದಲನೆಯ ವರ "ಆವ ಜನ್ಮಾಂತರದೊಳೆನಗೆ ರಾಜೀವ ನಾಭನ ಭಕ್ತಿ ದೊರೆಕೊಳಲಿ" ಎಂಬುದೇ. ಇವನು ಹುಟ್ಟಿದ ದಿನವೇ ಮಾತಾ ಪಿತರನ್ನು ಕಳೆದುಕೊಂಡವನು. ಚಿಕ್ಕಂದಿನಲ್ಲಿಯೇ ನಾಕುತಾಯಿಯನ್ನು ಕಳೆದುಕೊಂಡು ದೇಶಿಗನಾದ. ದೈವದಿಂದ ದೊರಕಿದ ನಾಲಗ್ರಾಮದಪೂಜಕ ನಾದ ಕೊಲೆಗಡಕರು ಕೊಲ್ಲಲು ಬಂದಾಗ "ದಿವ್ಯ ಸಾಲಗ್ರಾಮದು ಪಲದತಿ ಮಹಿಮೆಯಿಂದ ಬಗೆ ತೋರಲು ಆಗ ಮುರಹರ, ಕೃಷ್ಣ, ಕಮಲಾಕ್ಷ, ಖಗ- ರಾಜಗಮನ, ಸಲಹು" ಎಂದು ಚೀರಿದನಂತೆ. ಕಿರಾತರೊಡನೆ ಕುಳಿಂದಕನು ಅಡವಿಯಲ್ಲಿ ಬಂದಾಗ ಚಂದ್ರಹಾಸ ಬಾಲಕನು "ತನ್ನ ತಾಯ್ತಂದೆಗಳನು

ಒಡಹುಟ್ಟಿದವರ ಹಂಬಲಿಸದೆ ಮುರಾರಿಯುಂ ನೆನೆವನು" (ಹರಿಯನೇ ಜಪಿಸುತ ಅಳುತಿಹ ಬಾಲನಂ ಕಂಡು, ಸಂ ೨೮, ಪ ೫೪). "ಅದರಿಂದವಂಗೆ ಒಡೆಯನು ಅಚ್ಯುತನು" ಎಂದು ಪುಳಿಂದನ ತರ್ಕ. ಇವನನ್ನು ಅಕ್ಷರಾಭ್ಯಾಸಕಿರಿಸಿದೊಡೆ "ಹರಿಯೆಂಬೆರಡು ವರ್ಣವಲ್ಲದೆ ಪೆರತನು ಅಕ್ಷಿಯಿಂದ ಈಕ್ಷಿಸದೆ ವಾಚಿಸವ" ಇದ್ದನಂತೆ (ಸಂ. ೨೯, ಪ. ೪). ಇವನು ಬಾಲಕ್ರೀಡೆಯಲ್ಲಿಯೂ ಗೆಳೆಯರೊಡನೆ ವೈಷ್ಣವಭಕ್ತಿಯ ಆಟಗಳನ್ನೇ ಆಡುತ್ತಿದ್ದನು. ದೊಡ್ಡವನಾದ ಮೇಲೆ "ವಿದಿತ ವೇದಾರ್ಥವುಂ ವಿಷ್ಣುವೆಂದು ಅರಿತು, ಬಹುವಿಧ ಶಾಸ್ತ್ರತತಿಗೆ ಹರಿಯೆ ಗತಿಯೆಂದು ತಿಳಿದು ...ನಿಜಭಕ್ತಿ ಚಾಪಕೆ ಸತ್ವಗುಣಗಳನು ಆಳವಡಿಸಿ ತನ್ನ ಬುಧಿಯ ಶರಮುಂಮಾಡಿ ಕೃಷ್ಣನಂ ಗುರಿಮಾಡಿ ವಿಧಿಯಾನನು ಅನುಪಮ ಧನುರ್ವಿದ್ಯೆಯುಂ ಜಗದೊಳು ಅಧಿಕತರವಾಗಿ ಸಾಧಿಸಿ ಪರಮ ಭಾಗವತ ಕಲೆಗಳಿಂದ ಎಸೆದಿರ್ದನು." (ಸಂ ೨೯, ಪ ೮). ಚಂದ್ರಹಾಸನಿಗೆ ಭಕ್ತಿಯೇ ಚಾಪ, ಸತ್ವವೇ ಗುಣ (ಹೆದೆಯ ಹಾರ), ತನ್ನ ಬುದ್ಧಿಯೇ ಶರ, ಕೃಷ್ಣನೇ ಗುರಿ.

ಚಂದ್ರಹಾಸನ ಚರಿತ್ರೆಯಿಂದ ಶ್ರೀ ರಾಮಾನುಜಾಚಾರ್ಯರು, ಶ್ರೀ ಮಧ್ವಾಚಾರ್ಯರು ಯಾವ ಪಾರ ಕಲಿತರೋ ಇಲ್ಲವೋ ಇದನ್ನು ಹೇಳಲು ಸಾಧನೆಯಿಲ್ಲ. ಆದರೂ ಸಂಸ್ಕೃತ ಜೈಮಿನಿ ಭಾರತವು ಮಾತ್ರ ಶ್ರೀರಾಮಾನುಜಾಚಾರ್ಯರ ಅನಂತರದಲ್ಲಿ ಅಷ್ಟೇಕೆ, ಶ್ರೀಮಧ್ವಾಚಾರ್ಯರ ಅನಂತರದಲ್ಲಿ ರಚಿತವಾಗಿರಬೇಕೆಂದು ತೋರುವುದು. ಅದರಂತೆಯೇ ಲಕ್ಷ್ಮೀಶನ ಜೈಮಿನಿ ಭಾರತವೂ ಕರ್ನಾಟಕದಲ್ಲಿ ಭಕ್ತಿಮತದ, ಮಾಧ್ವ ಭಕ್ತಿಮತದ, ಪುಂಡಲೀಕ ಭಕ್ತಿಮತದ ಪುನರುದ್ಧಾರ ಕಾಲವಾದ ಶ್ರೀವ್ಯಾಸ, ಪುರಂದರದಾಸರ ಸಮಕಾಲದಲ್ಲಿ ಹುಟ್ಟಿರಬೇಕು ಎಂದು ತೋರುತ್ತದೆ. ಚಂದ್ರಹಾಸನು ಭಾಗವತ ಪುರಾಣದಲ್ಲಿ ಪ್ರಖ್ಯಾತರಾದ ಧ್ರುವ, ಪ್ರಲ್ಹಾದ, ರುಕ್ಮಾಂಗದ, ಬಲಿಗಳಂತೆ ಅಷ್ಟೇ ಅಲ್ಲದೆ "ಕೀರ್ತಿಯಿಂ ಪುಂಡರೀಕನಾಗಿದ್ದ" ನಂತೆ. ಈ ಪುಂಡರೀಕನು ಶ್ರೀ ವಿಠ್ಠಲಭಕ್ತನಾದ ಪುಂಡಲೀಕನೆಂದೇ ತೋರುತ್ತದೆ. ಪುಂಡಲೀಕನ ಹೆಸರು ಮೂಲ ಸಂಸ್ಕೃತ ಜೈಮಿನಿಯಲ್ಲಿ ಈ ಸಂದರ್ಭದಲ್ಲಿಯೂ ಬಂದಿಲ್ಲ, ಇಡಿಯ ಗ್ರಂಥದಲ್ಲಿಯೂ ಬಂದಿಲ್ಲ. ವ್ಯಾಸ ಪುರಂದರದಾಸರ ಸಮಕಾಲೀನನಾದ ಕನಕದಾಸನು ತನ್ನ "ಮೋಹನ

ತರಂಗಿಣಿ'ಯಲ್ಲಿ ಬಕದಾಲ್ಭ್ಯ, ಪುಂಡರೀಕ, ಅರ್ಜುನ, ತಾಮ್ರಧ್ವಜರನ್ನು ಮಾಂಧಾತವ್ಯಾಜದಿಂದ ವಿಷ್ಣುಭಕ್ತರೆಂದು ಹೊಗಳುತ್ತಾನೆ. ಇವರು ಲಕ್ಷ್ಮೀಶನ ಜೈಮಿನಿ ಭಾರತ ಕೀರ್ತಿತರು.

ಚಂದ್ರಹಾಸನು ಒಬ್ಬ ಮೂಕ ನಾಯಕ. ಕೊಲ್ಲಲು ಬಂದರೂ ಹರಿನಾಮ, ಕಡಿಯಲು ಬಂದರೂ ಹರಿನಾಮ, ಕಲಿತರೂ ಹರಿನಾಮ, ಕೇಳಿದರೂ ಹರಿನಾಮ. "ಕನ್ಯಾವರಣದೊಳ್ ಕುಲಪರಂಪರೆಯನು ಒರೆಯೆನಲ್ಕೆ ಶಶಿಹಾಸನು, ಎನಗೆ ವಾಮನ ಗೋತ್ರಂ, ಅರವಿಂದನಾಭಂ ಪಿತಂ, ಹರಿ ಪಿತಾಮಹಂ, ಮುರಹರಂ ಪ್ರಪಿತಾಮಹಂ" ಎಂದು ಅಲ್ಪ ಭಾಷಿತವಲ್ಲದ ಸಂಜಲ್ಪಿತವನು ಆಡುವನು ( ಸಂ ೩೧, ಪ ೧೫–೧೬ ) ಚಂದ್ರಹಾಸನು ಬಾಯ್ದೆರೆದದ್ದು ಎಂದರೆ ಈ ಆಖ್ಯಾನದಲ್ಲಿ ದೇವಿಯನ್ನು ಸ್ತುತಿಸುವಾಗ ಒಮ್ಮೆ, ಕೃಷ್ಣದರ್ಶನವಾದಾಗ ಮತ್ತೊಮ್ಮೆ ಪ್ರತ್ಯಕ್ಷ ಕೃಷ್ಣನೆ "ನೋಡಿರ್ಪೆ ಪಾರ್ಥ ವೈಷ್ಣವ ಶಿರೋಮಣಿಯಂ" ಎಂದು ಒಂದು ಮಾತಿನಲ್ಲಿ ಅವನ ಬಗ್ಗೆ ಹೇಳುತ್ತಾನೆ. "ಮೂಡಿ ಮುಳುಗುವ ಮಾಧವಧ್ಯಾನ ಚೇತನದ, ಸೂಡಿದ ಮುಕುಂದ ಪಾದಾಬ್ಜ ಮಸ್ತಕದ, ಸತ್ವಗುಣದ ಬೀಡೆನಿಪ ಕಲಿ ಚಂದ್ರಹಾಸ' (ಸಂ ೩೨ ಪ ೯), "ಸಿಕ್ಕಿದೊಡೆ ಕೃಷ್ಣದರ್ಶನದ ಪುಣ್ಯವೆ ಸಾಕು. ಮಿಕ್ಕ ಸುಕೃತದ ಗಣನೆಯೇಕೆ" ಎಂಬುದು ಇವನ ಮತ (ಸಂ ೩೨, ಪ. ೪) ಇವನಿಗೆ ಕೃಷ್ಣನು "ಧ್ಯಾನಿಸುವನು ಆಬಾಲ್ಯದಿಂದ ಎನ್ನನು, ಈತಂಗೆ ಆನು ಒಲಿದೆನು. ಎಂದು ನಿಜರೂಪಮಂ" ತೋರಿದನಂತೆ. ಇವನ ನಲುವಾಗಿ "ತನ್ನ ಮಾರ್ಗಗತಿ ಲೇಸು ಅನ್ಯರೆನಗುವಂದದೊಳಾಚರಿಸೆ ಭಯಾವಹಂ" (ಸಂ. ೩೨; ಪ. ೧೩) "ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ-ಭಯಾವಹಃ" ಎಂಬ ಪೂರ್ವದ ಗೀತಾವಚನವನ್ನು ನಧ್ಯಕ್ಕೆ ತಿರಸ್ಕರಿಸಿ "ತನ್ನ ಶರಣರ ಜೀವನವೆ ತನಗೆ ಜೀವನಂ, ತನ್ನ ಶರಣರ್ ಬೇರೆ ತಿಳಿಯೆ ತಾಂ ಬೇರಲ್ಲ. ತನ್ನ ಶರಣರ ಹೃದಯಕಮಲದೊಳ್ ಪ್ರತ್ಯಕ್ಷಮಾಗಿ ತಾನಿರುತಿರ್ದನು" (ಸಂ. ೩೨, ಪ ೧೫) ಆದ್ದರಿಂದ ಕ್ಷತ್ರಿಯನು ಯುದ್ಧಧರ್ಮವನ್ನು ಬದಿಗಿಟ್ಟು ತನ್ನ ಪ್ರತಿಪಕ್ಷಿಯು ವೈಷ್ಣವಭಕ್ತನಾಗಿದ್ದರೆ, ಅವನೊಡನೆ ಸಖ್ಯ ಬೆಳಿಸುವುದೇ ಹೆಚ್ಚಿನ ಧರ್ಮವೆಂದು ಭಗವದ್ಗೀತೆಯ ನಂತರದ ಭಾಗವತ ಧರ್ಮವನ್ನು ಸಾರಿದ್ದಾಗಿದೆ ಈ ಕಥೆಯಲ್ಲಿ. ಹೀಗಿದೆ ಈ ಆಖ್ಯಾನದ ಮೇಲ್ಮೆ.

---

**ಲಕ್ಷ್ಮೀಶನ**

# ಚಂದ್ರಹಾಸ

## ೨೮ ನೆಯ ಸಂಧಿ

**ಇಂದ್ರಜಂ ತುರಗಂಗಳಂ ಕಾಣದಿರೆ, ನಾರ**
**ದಂ ದೃಷ್ಟಿಗೋಚರಕ್ಕೈದಿ, ವಿಸ್ತರಿಸಿದಂ**
**ಚಂದ್ರಹಾಸ ಕಥಾ ವಿಶೇಷಮಂ ಕರ್ಣಪೀಯೂಷಮಂ**
**ಪ್ರೀತಿಯಿಂದ ॥**

ಭೂಮಿಶ ಕೇಳ್, ಬಳಿಕ ಸೌರಾಷ್ಟ್ರದಿಂದ ಸು
ತ್ರಾಮಸುತನಸುರಾರಿ ಸಹಿತ ಕುದುರೆಗಳ ಕೂ
ಡಾಮಹಾನದವನುತ್ತರಿಸಿ ನಡೆತಿರುತಿರ್ದನಾ ಪಥದೊಳ್ಕೈಕಿಲಿಂದ ॥
ಹೇಮಂತ ಶೈಶಿರದ ಮಾಗಿ ಮಡಲಿಡೆ, ತರಣಿ
ಸೋಮನಂತಿರೆ, ಬಿಸಿಲ್ಬೆಳ್ದಿಂಗಳಂತಾಗೆ,
ತಾಮರಸರಾಜಿ ನಸಿದವು, ಕುಗ್ಗಿದವು ಕೂಡೆ ಕೋಗಿಲೆಯ ಕೊರಳ್ದನಿಗಳು
॥ ೧ ॥

ಬಾಲೆಯರ ಕಡೆಗಣ್ಣ ಬಾಣದಿಂದಂಗಜಂ,
ರೋಲಂಬರಾಜಿ ಸೊಕ್ಕಾನೆಗಳ ಸೊವಡಿಂದ,
ಕಾಲಮಂ ತಳುತ್ತವೋಲಾದುದು ಪೂಗಳಿಲ್ಲದೆ ಮಸುಳ್ದವಿನ ಶಶಿರುಚಿಗಳು ॥
ಜ್ವಾಲೆ ಶೀತಳಮಾದುದಗ್ನಿಯಂ ಬಿಟ್ಟು ಕಾಂ
ತಾಲಿಂಗನವನೆ ಬಯಸಿದುದು ಕಾಮುಕಜನಂ
ಮೂಲೋಕಮಂ ಮಾಗಿ ನಡುಗಿಸಿತ್ತು, ಮೇಣುಡುಗಿಸಿತು ಪೆರ್ಚಿದ್ಮೈಕಿ-
ಲಿಂದ ॥ ೨ ॥

‡ ಕಳೆ

ಉತ್ತಮಾಂಗದ ಗಂಗೆಯುಂ ಸಾಗರಕೆ ಕಳುಹಿ,
ಪೊತ್ತ ಶಶಿಕಲೆಯನಂಬರಕಿಟ್ಟು, ತನ್ನ ನಡು
ನೆತ್ತಿಗಣ್ಣಿಂ ಕೈಯೊಳಗ್ನಿಯುಂ ತಾಳ್ದುದಲ್ಲದೆ ಕಾಂತೆಗರೆವೈಯನು ||
ಇತ್ತು ಬಿಡದಪ್ಪಿಕೊಂಡಿರುವನೀಶ್ವರನೆನಲ್
ಮತ್ತೆ ಕಾಮಿನಿಯರ ಕುಚಾಲಿಂಗನವನ್ನುಳಿದೊ
ಡೆತ್ತಣದು ಹಿಮಕೆ ಭೇಷಜಮೆಂದು ವಿರಹಿಗಳ್ಕೊಪರನರಸುತಿರ್ದರು ||೩||

ನೆರೆಲೋಭಿ ವಿತ್ತಮಂ ಸುಯಿಧಾನಮುಂ ಮಾಳ್ಪ
ತೆರದಿಂದ, ಕಾಮಿನಿಯ ಪ್ರಣಯಮಂ ನಂಬಿದವ
ನರಿವಿನಂತಿಡಿದ ಶೈಶಿರದ ಶೀತಳಕೆ ಪಗಲಿರುಳ್ತಮ್ಮ ಗೂಡುಗಳನು ||
ಪೊರಮಟ್ಟು, ಪಾರಲೊಲ್ಲದೆ, ವಾಯುಸ ಪ್ರತತಿ
ಗರಿಗಳಂ ಪೊದಿಸಿ, ಮುಗ್ಗುಲೊಳಿಟ್ಟು, ಕೋಗಿಲೆಯ
ಮರಿಗಳಂ ಮೈಯೊಳ್ಪುದುಗಿಕೊಂಡು ಮರುಕದಿಂದೈದೆ ಪಾಲಿಸುತಿರ್ದುವು ||೪||

ಭುವನಮಂ ತೀವಿರ್ದ ಹಿಮವನುಂ ತಮವನುಂ
ತವಿಸುವುತ್ಸಾಹದಿಂದವಗಡಿಸಿ ಜವಗಡಿಸಿ
ಭವಣೆಗೊಂಡಭ್ರದೊಳ್ತೊಳಲುತ್ತ ಬಳಲುತ್ತ ಬಂದೊಡಂ ಮತ್ತೆ ಬಿಡದೆ ||
ಕವಿಯಲ್ಪ್ರತಾಪದೇಳಿಗೆ ನಂದಿ ಮಿಗೆ ಕುಂದಿ
ರವಿ ತಣ್ಣಗಾದನೆನೆ ಕಾಣಿಸಿತು, ಮಾಣಿಸಿತು
ತವೆ ತಕ್ಕೆಯೊಳ್ನೆರೆಯ ಬಲ್ಲರೊಳ್ನಲ್ಲರೊಳ್ಮನಿಸನಾ ಶೈಶಿರದೊಳು ||೫||

ಉರ್ವೀಶ ಕೇಳ್, ಬಳಿಕ, ಸೇನಾ ಸಮಗ್ರದಿಂ
ಗೀರ್ವಾಣಪತಿನಂದನಂ ಬಹಳ ದೇಶ-ವನ-
ಪರ್ವತ-ನದೀ-ನದಂಗಳನುತ್ತರಿಸಿ ಕುದುರೆಗಳ ಹಿಂಡುಗೊಂಡು ಬರಲು ||
ತರ್ವಾಯೊಳವು ಹಾಯ್ದುವನಿಲಜವದಿಂ ಪಡೆಯೊ
ಳೋರ್ವರುಮರಿಯದಂತೆ ಕುಂತಳ ನಗರಕೆ, ಬಲ
ಗರ್ವಿತಂ ಚಂದ್ರಹಾಸಾಖ್ಯನರಸಲ್ಲಿಗವನಾ ಹರಿಗಳಂ ತಡೆದನು ||೬||

ಬಿಂಗಾವಲಾಗಿರ್ದ ಪಟುಭಟರ್ಕ್ಕೀರಿದ ತು
ರಂಗಯುಗಮುಂ ಕಾಣದೃತಂದು. ಸಿತವಾಹ
ನಂಗೆ ಬಿನ್ನೈಸಿದರ್—ಜೀಯ, ಪೋದವು ಹರಿಗಳರಸಿದಡೆ ಗೋಚರಿಸವು ॥
ಮುಂಗೈವ ಕಜ್ಜವುಂ ಬೆಸಸೆನೆ ಧನಂಜಯುಂ
ಮಂಗಳಾತ್ಮಕನ ಮೊಗ ನೋಡಿ ಚಿಂತಿಸುವಿನಂ,
ಕಂಗೊಳಿಸಿತಾಗಸದೊಳೊಂದು ಬೆಳಗೆರಡನೆಯ ದಿನಮಣಿಯ ತೇಜದಂತೆ
॥ ೭ ॥

ಕ್ರೀಡೆಯಂ ಮಾಧವನುತ ಪ್ರಸಂಗದೊಳುಂಟು
ಮಾಡುತ್ತ, ಸುಮನೋನುರಾಗದಿಂದಿರದೆ ನಲಿ
ದಾಡುತ್ತ, ಕುಜವಂಶಭೇದನಂ ಗೈವುತ್ತ, ಸಾಮಜೋಲ್ಲಾಸದಿಂದ ॥
ಪಾಡುತ್ತ, ವಿಷ್ಣುಪದಕಮಲ ಮಧುಕರನೆಂಬ
ರೂಢಿಯಂ ನಿಜವಾಗಿ ಕಾಣಿಸುವ ತೆರದಿಂದ,
ನೋಡುವರ ಕಣ್ಗೆ ಗೋಚರಿಸಿದಂ ನಾರದಮುನೀಶ್ವರಂ ಬಾಂದಳದೊಳು
॥೮॥

ಕೆಂಜೆಡೆಯ, ಸುಲಿಪಲ್ಲ, ರುಚಿರ ಕೃಷ್ಣಾಜಿನದ,
ಮಂಜುಳದ ತುಳಸಿ ದಂಡೆಯ, ಕೊರಳ ತಾವಡದ,
ರಂಜಿಸುವ ಪದ್ಮಾಕ್ಷಗಳ, ಲಲಿತ ಮೇಖಲೆಯ, ಚಾರುತರದುಪವೀತದ ॥
ಕಂಜನಾಭನ ಧ್ಯಾನದಮಲವೀಣಾಕ್ವಣಿತ-
ಸಂಜಾತಗಾನಸುಖದೆಸವ ತೇಜೋಮಯಾ
ಪುಂಜವೆನಿಪಮರಮುನಿ ನಾರದಂ, ಪಾರ್ಥಾದಿಗಳ ಕಣ್ಗೆ ಕಾಣಿಸಿದನು ॥೯॥

ಅಂಭೋಜಮಿತ್ರನಾಸರೊಳಾಗಸವನುಳಿದು
ಕುಂಭಿಣಿಗೆ ಬಂದವನೊ ಪೇಳೆನಲ್, ಗಗನಪಥ
ದಿಂ ಭಾಸುರಪ್ರಭೆಯೊಳಾ ಮುನಿಪನಿಳಿತಂದಡಸುರಾಂತಕಾದಿ ನೃಪರು ॥
ಸಂಭಾವಿಸಿದರಾ ತಪೋನಿಧಿಯನತಿವಿನಯ
ಗಂಭೀರವಾಕ್ಯದಿಂ ಬೆಸಗೊಂಡನುಪಚರಿಸಿ
ಜಂಭಾರಿನಂದನಂ ನಾರದನನಖಿಳಲೋಕಸ್ಥಿತಿವಿಶಾರದನನು ॥೧೦॥

ಎಲೆ ಮುನೀಶ್ವರ, ತನ್ನ ಕುದುರೆಗಳ್ಪೋದವೀ
ನೆಲದೊಳಾವೆಡೆಯೊಳಿರ್ದಪವೆಂದರಿಯೆನಿನ್ನು
ಬಲವಂತರೀಸ್ಥಳದೊಳಿಲ್ಲಲೇ, ಕಂಡುದಂ ತನಗೊರೆಯುವೇಳ್ಪುದೆಂದು ॥
ಫಲಗುಣಂ ಕೇಳ್ದಡಾ ನಾರದಂ ನಸುನಗುತ
ಸುಲಲಿತಾಶ್ವಂಗಳೈದಿದವು ಕುಂತಳಪುರಕೆ,
ಕಲಿಚಂದ್ರಹಾಸಾಖ್ಯನಲ್ಲಿಗರಸಾನೃಪಂ ಕಟ್ಟಿಕೊಂಡಿಪನೆಂದನು ॥೧॥

ಹಿಂದಣರಸುಗಳ ಬಲವಿುವನ ಹದಿನಾರರೊಳ
ಗೊಂದು ಕಳೆಯಿಲ್ಲಿವಂ ಪರಮ ವೈಷ್ಣವನಿವನ
ಮುಂದಧಟರಂ ಕಾಣೆನಾಹವದೊಳೀತನ ಚರಿತ್ರಮತಿ ಚಿತ್ರವೆಂದು ॥
ಮಂದಸ್ಮಿತದೊಳಾ ತಪೋಧನಂ ಪೇಳ್ದಡೆ, ಪು
ರಂದರಾತ್ಮಜನವನ ವರ್ತನವನಾದ್ಯಂತ
ದಿಂದೆನಗೆ ವಿಸ್ತಾರಮಾಗಿ ವಿರಚಿಸಿ ಪೇಳ್ಪುದೆನಲರ್ಜುನಂಗಾ ತಪೋನಿಧಿ
ನುಡಿದನು ॥೨॥

ಸಮಯಮಲ್ಲಿದು ಪಾರ್ಥ, ನಿನಗೆ ಸಿಕ್ಕಿರ್ದಪವು
ವಿಮಳಮುಖವಾಜಿಗಳ್ಚಿಂತಿಸುತಿಹಂ ಮಹೀ
ರಮಣನಿಭಪುರದೊಳೆನೆ, ಫಲುಗುಣಂ ನರರಾಳ್ಕೆ ಚಿರಕಾಲಮಿರ್ಪುದಿಲ್ಲ ॥
ಭ್ರಮೆಯಿಂದ ಕೇಳದಿರಬಹುದೆ ವೈಷ್ಣವ ಕಥೆಯ
ನಮಮ ! ತನಗಾವ ಪೊತ್ತುಭಯ ಬಲಮಧ್ಯದೊಳ್
ಕಮಲಾಕ್ಷನೊರೆದ ಗೀತಾಮೃತವನಾಲಿಪಂದೆನೆ ಮುನಿಪನಿಂತೆಂದನು ॥೩॥

ಇನ್ನೊರವೆನಾಲಿಸಾದಡೆ, ಪಾರ್ಥ, ಧಾರ್ಮಿಕಂ
ಮುನ್ನೊರ್ವನುಂಟು ಕೇರಳದೇಶದವನಿಪಂ,
ಸನ್ನುತಗುಣೋದಯಂ, ಮೇಧಾವಿಯೆಂಬವಂ, ಬಲಯುತಂ ಬಳಿಕವಂಗೆ ॥
ತನ್ನಪಟ್ಟದ ರಾಣಿಯೊಳ್ಬಹಳ ಭಾಗ್ಯಸಂ
ಪನ್ನನೆಡಹಂಘ್ರಿಗರುವೆರಳಾಗಿ ದಿವದೊಳು
ತ್ಪನ್ನನಾದಂ ಮೂಲನಕ್ಷತ್ರದಂದರಿಷ್ಟಾಂಶದೊಳ್ಸುಕುಮಾರನು ॥೪॥

ಪುತ್ರೋತ್ಸವಂ ಮಾಡಿ ಕೆಲವು ದಿನವಿರೆ ನೃಪಂ
ಶತ್ರುಗಳ್ಬಂದು ನಿಜನಗರಮಂ ಮುತ್ತಿದರ್,
ಕ್ಷತ್ರಧರ್ಮದೊಳವರೊಡನೆ ಯುದ್ಧರಂಗದೊಳ್ಪ್ರಿಯ್ದಾಡಿ ಮಡಿಯೆ, ಕೇಳ್ದು ॥

ಚಿತ್ರಭಾನುಪ್ರವೇಶಂ ಗೈದಳಂದು ಶತ
ಪತ್ರಲೋಚನೆ ಪತಿವ್ರತೆಯಾಗಿ, ಬಳಿಕಾ ಧ
ರಿತ್ರೀಶ್ವರನ ರಾಜ್ಯಮಂ ತೆಗೆದುಕೊಂಡಹಿತರಾಳ್ದರದನೇವೇಳ್ವೆನು ॥೧೫॥

ಬಳಿಕೋರ್ವ ಧಾತ್ರಿ ಶಿಶುವಂ ಕೊಂಡು, ಪೊರಮಟ್ಟು,
ತೊಳಲಿ, ಬಳಲುತ, ಮೆಲ್ಲಮೆಲ್ಲನೆಯ್ತಂದು, ಕುಂ
ತಳ ನಗರಮಂ ಪೊಕ್ಕಳಲ್ಲಿ ಸಾಕಿದಳರ್ಭಕನನತಿ ಸ್ನೇಹದಿಂದ ॥
ಎಳೆಯಂಗೆ ಬೇಕಾದವಿಲ್ಲದಿರೆ ಮರುಗುವಳ್,
ಪೊಳಲೊಳಗೆ ತಿರಿದು, ಹೊರದಳಲುವಳ್ಮದ್ದಿಸಿ ಪ
ಸುಳೆಯ ಬಿನದಂಗಳ್ಗೆ ಹಿಗ್ಗಿ, ಬಿಸುಸುಯ್ವಳವಳನುದಿನದೊಳಾರ್ತೆಯಾಗಿ ೧೬॥

ಇಡೆ ತೊಟ್ಟಿಲಿಲ್ಲಾಡಿಸುವರಿಲ್ಲ ನಿನಗೆ, ಪೊಂ
ದೊಡಿಗೆಯಿಲ್ಲಿರೆ ನಿಳಯಮಿಲ್ಲ, ಬಿಡದೆರವ ನೀರ್,
ಕುಡಿವಾಲ್ಗಳಿಂಡೆ ಬೆಂಡೆಗಳಿಲ್ಲ, ಲಾಲಿಸಿ ನಲಿವ ತಂದೆತಾಯ್ಗಳಿಲ್ಲ ॥
ಪೊಡವಿಪತಿ ಕೇರಳಾಧೀಶ್ವರಂ, ತನಯನಂ
ಪಡೆದನಿದಕೀಗ ನಿನ್ನಂ ನೋಡುವೆನ್ನ ಕಂ
ಣೊಡೆಯದಕಟಕಟೆಂದು ಬಿಸುಸುಯ್ದಳಲ್ವಿ, ಮರುಗುವಳಾಕೆ ದಿನದಿನ-ದೊಳು ॥೧೭॥

ಮೊಳೆವಲ್ಲೊಗುವ ಜೊಲ್ಲು, ದಟ್ಟಡಿ, ತೊದಲ್ವನುಡಿ
ತೊಳತೊಳಗುತಿಹ ಸೊಬಗು ಮೆರವ ನಗೆಮೊಗದ ಬಗೆ,
ಪೊಳೆವ ಕಣ್ಮೆಸುಪನುಣ್ಗದಪಿಗೆಣೆ ಚಲ್ವಪಣೆ, ಕುರುಳು ಜೋಲ್ವಂಬೆಗಾಲು ॥
ಸುಳಿನಾಭಿ, ಮಿಗೆ ಶೋಭಿಪಧರದೆಡೆ, ಬಟ್ಟದೊಡೆ,
ನಳಿತೋಳಿಡಿದ ಧೂಳಿ, ಸೊಗಯಿಸುವ ವರ ಶಿಶುವ
ನಲಿದಾಡಿಸುವ ರೂಢಿಯಿಲ್ಲೆಂದು ನೆರೆ ನೊಂದು ಮರುಗವಳತಿ‡ಶ್ರಮ-ದೊಳು ॥೧೮॥

---

‡ ಅಜಶ್ರಮದೊಳು

ಬಾಲಕನ ಲೀಲೆಯಂ ಕಂಡು ಹಿಗ್ಗುವಳೊಮ್ಮೆ,
ಲಾಲನೆಗಳಿಲ್ಲೆಂದಳ್ತು ಮರುಗುವಳೊಮ್ಮೆ,
ಪಾಲಿಸಿದಳಿಂತು ನಡೆನುಡಿಗಳಂ ಕಲಿವಲ್ಲಿಪರ್ಯಂತಮಾ ಶಿಶುವನು ||
ಮೇಲೆ ರುಜೆ ಬಂದಡಸಿ, ವಿಧಿವಶದೊಳಾ ಧಾತ್ರಿ
ಕಾಲನರಮನೆಗೈದಿದಳ್ಬಳಿಕ ಪಸುಳೆಗೆ ನಿ
ರಾಲಂಬಮಾಗಲಾ ಪಟ್ಟಣದೊಳೆಲ್ಲರ್ಗೆ ಕಾರುಣ್ಯಕೀಡಾದನು ||೧೯||

ಚಲ್ವಶಿಶು ಬೀದಿಯೊಳ್ಬಂದು ದೇಶಿಗನಾಗಿ
ನಿಲ್ವನಂ ಕಂಡು, ಕಂಡಬಲೆಯರ್ ಕರೆಕರೆದು
ಮೆಲ್ವ ತನಿವಣ್ಗಳಂ, ಕಜ್ಜಾಯ, ಬೆಂಣೆ, ಸಕ್ಕರೆ, ಕೊಡುವರೆತ್ತಿಕೊಂಡು ||
ಸೊಲ್ವಮಾತುಗಳನಾಲಿಸಿ ಮುದ್ದುಗೈವರವ
ರುಲ್ವುದಕ ಮಜ್ಜನಂಗೈಸಿ, ಮಡಿಯಂ ಪೊದಿಸಿ,
ಮೆಲ್ವಾಸಿನೊಳ್ಮಲಗಿಸುವರರ್ಥಿಯಿಂದೊಸೆದು ತಮ್ಮ ಮಕ್ಕಳ್ಗಳೊಡನೆ||೨೦||

ಪರಪುಟ್ಟನಾಗಿ ಪಟ್ಟಣದ ಬೀದಿಗಳೊಳಗೆ
ತಿರುಗುತಿಹ ಬಾಲಕನ ರೂಪವಂ ಕಂಡು, ಕರೆ
ಕರೆದು, ಭವನಂಗಳ್ಗೆ ಕೊಂಡೊಯ್ದು, ಗಣಿಕೆಯರ್ ತಮತಮಗೆ
ಮೋಹದಿಂದ ||
ಸರಸ ಪರಿಮಳ ಸುಗಂಧಂಗಳಂ ತಿಗುರಿ, ಕ
ಸ್ತೂರಿಯ ತಿಲಕವನ್ನಿಟ್ಟು, ಕಂಮಲರ್ಮುಡಿಸಿ, ಕ
ರ್ಪುರ ವೀಳೆಯಂಗೊಟ್ಟು, ಮುಡಿತೊಡಂಗಳೊಳೊಯ್ದು ಸಿಂಗರಿಸಿ
ಕಳುಹುತಿಹರು ||೨೧||

ಆಡುವೆಳ ಮಕ್ಕಳೊಡನಾಡುವಂ, ಲೀಲೆ ಮಿಗೆ
ನೋಡುವಚ್ಚರಿಗಳಂ ನೋಡುವಂ ಬಾಲಕರ
ಕೂಡೆ ಮನೆಮನೆಗಳೊಳ್, ಕಾಡದಿಹನೆಲ್ಲರ್ಗೆ ಮುದ್ದಾಗಿ ಮೋಹಿಸುವನು||
ಪಾಡುವರೆ ನೋಡುವರ, ನಾಡೆ ಸ್ವಾದನಗಳಂ
ಮಾಡುವರನಳ್ತಿಯಿಂ ಬೇಡುಹರ ನೆರವಿಯೊಳ್,
ಕ್ರೀಡಿಸುವನಾ ಪುರದ ರೂಢಿಸಿದ ಬೀದಿಯೊಳ್ ಪಸುಳೆ ಪರಪುಟ್ಟನಾಗಿ||೨೨||

ಬಟ್ಟೆಯೊಳ್ಪುಣ್ಯವಶದಿಂದರ್ಭಕನ ಕಣ್ಗೆ
ಪುಟ್ಟೆಸಾಲಗ್ರಾಮದೊಂದು ರಮಣೀಯ ಶಿಲೆ
ಕಟ್ಟಸಕದಿಂದ ಕಾಣಿಸಲದಂ ತಾನೆತ್ತಿಕೊಂಡು, ಕೆಳೆಯರ್ಗೆ ತೋರಿ ||
ಬಟ್ಟಗಲ್ಲಿಂತು ವರ್ತುಳದಿಂದ ಚೆಲ್ವಾಗಿ
ಪುಟ್ಟುವುದೆ ಪೊಸತೆಂದು ಪಿಡಿದಾಡುತೊಡನೆ ಬೈ
ಚಿಟ್ಟುಕೊಂಬಂ ಬಾಯೊಳನವರತಮಿರಿಸಲ್ಕೆ ತನಗೆ ಮನೆಯಿಲ್ಲವಾಗಿ ||೨೩||

ತೊಳಪ ಸಾಲಗ್ರಾಮಮುಪಲಮಂ ಬಾಲಕಂ
ಕೆಳೆವಕ್ಕಳೊಡನಾಟದಶ್ಮಗೋಳಕವೆಂದು
ತಿಳಿದಣ್ಣೆ ಕಲ್ಲೊಡ್ಡಿಗಳನಾಡುತದರಿಂದ ಗೆಲ್ದೆಲ್ಲರಂ ಜರಿಯುತ* ||
ಕಳಕಳಿಸಿ ನಗುತತಿಸ್ನೇಹದಿಂ ಕ್ರೀಡೆಯಂ
ತಳೆದಾಗಳುಣಿಸುಗಳನುಂಬಲ್ಲಿ ತನ್ನ ಕೈ
ದಳಕೆ ತಂದುಳಿದ ಪೊತ್ತುಗಳಾವಗಂ ಬಾಯೊಳಿರಿಸಿಕೊಂಡಿರುತಿರ್ಪನು ||೨೪||

ಕುಂತೀಕುಮಾರ ಕೇಳ್, ಆ ಮಹಾಪಟ್ಟಣದೊ
ಳಿಂತರ್ಭಕರೊಳಾಡುತಿಹ ಪಸುಳೆಗೈದು ವರು
ಷಂ ತುಂಬಿತಾ ಸಮಯದೊಳ್ಪ್ರಬಲದಿಂ ಪ್ರವರ್ತಿಪ ದುಷ್ಟಬುದ್ಧಿಯೆಂಬ ||
ಕುಂತಳೇಂದ್ರನ ಮಂತ್ರಿ ತನ್ನ ಮನೆಯೊಳ್, ವಿಪ್ರ
ಸಂತರ್ಪಣಂ ಗೈಯಲಾ ದ್ವಿಜರ್ ಭೋಜನಾ
ನಂತರದೊಳ್ಕೈದೆ ಸತ್ಕೃತರಾಗಿ ಕುಳ್ಳಿರ್ದು ಪರಸುತಲ್ಲಿರುತಿರ್ದರು ||೨೫||

ಅಲ್ಲಿ ಕೆಳೆಯರೊಳಾಡುತಿರ್ದ ಶಿಶುವಂ ಕಂಡ
ರುಲ್ಲಾಸದಿಂದೆಸವ ಭೂಸುರರ್ ಬಾಲಕನ
ಸಲ್ಲಲಿತ ರಾಜಲಕ್ಷಣಕೆ ಬೆರಗಾದರವನಂಗಮಂ ನೋಡಿ ನೋಡಿ ||
ನಿಲ್ಲದನುರಾಗದಿಂದಾರ ಸುತನೀ ತರಳ‡
ನೆಲ್ಲಿಂದ ಬಂದನೆಂದಾ ದುಷ್ಟಬುದ್ಧಿಯಂ
ಮೆಲ್ಲನೆ ವಿಚಾರದಿಂ ಕೇಳ್ದಡಾ ವಿಪ್ರರ್ಗೆ ನಗುತಾತನಿಂತೆಂದನು ||೨೬||

---

* ಜರವುತ ‡ ತರುಣ, ಕುವರ

ಈ ಪರಿಯೊಳಿನಿತಿಲ್ಲನಾಥರಾಗಿಹ ಬಾಲ
ರೀ ಪುರದೊಳೆತ್ತಣವನಾರ ಸುತನೆಂದರಿಯೆ
ವೀ ಪಸುಳೆಯಂ, ರಾಜಕಾರಿಯದೊಳಿಹವಿವರ ಚಿಂತೆ ನಮಗೇತಕೆನಲು ॥
ಆ ಪಾರ್ವರೆಂದಿರ್ದಡಂ ಚಾರು ಲಕ್ಷಣದೊ
ಳೀ ಪೊಳಲ್ಗೀ ಕುಂತಳಾಧೀಶನಾಳ್ವ ನ
ಮ್ಮಾಪೊಡವಿಗೊಡೆಯನಹನೀತನಂ ನೀನಿರಿಸಿಕೊಂಡು ರಕ್ಷಿಪುದೆಂದರು
॥ ೨೭ ॥

ಕ್ರೂರ ನಕ್ರಾಕುಲದೊಳಡಿದಿರ್ದ ಪೆರ್ಮಡು ಗ
ಭೀರ ನಿರ್ಮಲ ಜಲದೊಳೆಸೆವಂತೆ, ಮನದೊಳ್ ಕ
ಠೋರತರ ಭಾವಮಂ ತಳೆದು, ಬಹಿರಂಗದೊಳ್ ವಿನಯಮುಳ್ಳಾತನಾಗಿ ॥
ಚಾರು ಲಕ್ಷಣದ ಶಿಶುವಂ ನೋಡಿ, ಧರೆಯ ನೃಪಂ
ದಾರಕರ ನುಡಿಗೊಪ್ಪಿದವೊಲಿರ್ದು, ಬಳಿಕ, ಸ
ತ್ಕಾರದಿಂದಾ ವಿಪ್ರರಂ ಕಳುಹಿದಂ ದುಷ್ಟಬುದ್ಧಿ ನಿಜ ಭವನದಿಂದ ॥೨೮॥
ಈ ಕುಂತಳೇಂದ್ರಂಗೆ ಸುತರಿಲ್ಲ, ರಾಜ್ಯಮೆನ
ಗೇಕಾಧಿಪತ್ಯಮಾಗಿರ್ದಪದು, ಮುಂದಿವಂ
ಭೂಕಾಂತನಾದಪಂ ಗಡ, ವಿಪ್ರರೆಂದ ನುಡಿ ತಪ್ಪದೆನ್ನಾತ್ಮಜರ್ಗೆ ॥
ಬೇಕಾದ ಸಂಪದಂ ಬಯಲಾಗಿ ಪೋಪುದೆಂ
ದಾ ಕುಮತಿ, ಬೇರೊಂದುಪಾಯಮಂ ಚಿಂತಿಸಿ, ಭ
ಯಾಕಾರದೊಡಲ ಚಂ*ಡಾಲರಂ ಕರಸಿ ಬೆಸಸಿದನಾರುಮರಿಯದಂತೆ ॥೨೯॥
ಕಾನನಾಂತರದೊಳೀ ತರಳನಂ ಕೊಂದು, ನೀ
ವೇನಾದಡಂ ಕುರುಪು ತಂದೆನಗೆ ತೋರ್ಪುದೆಂ
ದಾ ನರೇಂದ್ರನ ಮಂತ್ರಿ ಬೆಸಸಿದಡೆ, ಪಶುಘಾತಕಗಳಾಡುತಿಹ ಶಿಶುವನು ॥
ಹೀನದಯದಿಂದ ಪಿಡಿದೆತ್ತಿ ಕೊಂಡೊಯ್ದರ್, ಭ
ಯಾನಕದೊಳಂದು ಕೊಲೆಗೆಳಸಿ ಪ್ರಲ್ಹಾದನಂ
ದಾನವೇಶ್ವರನಾಜ್ಞೆಯಿಂ ಕಾಳರಕ್ಕಸರ್ ಬಂದು ಕೈದುಡುಕುವಂತೆ ॥೩೦॥

* ಚಾಂಡಾಲರು

ಪಾತಕಿಗಳೊಡಲೊಳಿಹ ಪರಮಾತ್ಮನಂತೆ, ಯಮ
ದೂತರೆಳ‡ತಟದಜಾಮಿಳನಂತೆ, ಕಾಕ ಸಂ
ಘಾತದೊಳ್ ಸಿಕ್ಕಿರ್ದ ಕೋಗಿಲೆಯ ಮರಿಯಂತೆ, ನಲಗಿ ಕತ್ತಲೆಯೊಳಸೆವ||
ಶೀತಳ ಮರೀಚಿ ಲಾಂಛನದಂತೆ, ಬಹಳ ಕೋ
ಪಾತಿಶಯದೊಳಗಿಹ ವಿವೇಕದಂತಾಗ ಪಶು
ಘಾತಕಿಗಳೆತ್ತಿಕೊಂಡೊಯ್ವ ಬಾಲಕನಿರ್ದನವರೆಡೆಯೊಳಂಜುತಳುತ ॥೩೧||
ಪೆಗಲೊಳೇರಿಸಿ, ಬನಕೆ ಚಂಡಾಲರೊಯ್ಯುತಿರೆ
ಮಿಗೆ ಬೆದರಿ, ಭಯದಿಂದ, ಬಾಲಕಂ ಬಾಯೊಳಾ
ವಗಮಿರಿಸಿಕೊಂಡಿರ್ದ ದಿವ್ಯಸಾಲಗ್ರಾಮದುಪಲದತಿಮಹಿಮೆಯಿಂದ ॥
ಬಗೆದೋರಲಾಗ ಮುರಹರ ಕೃಷ್ಣಕಮಲಾಕ್ಷ
ಖಗರಾಜಗಮನ ಸಲಹೆಂದು ಚೀರಿವಡವನ
ಮೊಗನೋಡಿ ಕರುಣದಿಂ ಕಡಿಕರೆದೆಗರಗಿವರದೆಂತೊ ಹರಿನಾಮದೇಳ್ಗೆ॥೩೨॥
ಒಯ್ದು ವಸುಳಿಯನರಣ್ಯದೊಳಿರಿಸಿ, ಮರುಗಿ ಬಿಸು
ಸುಯ್ದು ಪಶುಘಾತಕಿಗಳಾ ದುಷ್ಟಬುದ್ಧಿಯಂ
ಬಯ್ದು, ಶಿಶುವಧೆಗಳುಕಿ ನಿಂದು, ನೋಡುತ ಕಂಡರರ್ಭಕನೆಡವಕಾಲೊಳು||
ಅಯ್ದಲ್ಲದೊಂದು ಬೆರಳಿರ್ಪುದಂ ಬಳಿಕದಂ
ಕೊಯ್ದು ಕುರುಪಂ ಕೊಂಡು ತಮ್ಮ ದಾತಾರನೆಡೆ
ಗೆಯ್ದಿ ತೋರಿವಡವನನವರ್ಗಳಂ ಮನ್ನಿಸಿ ಮಹೋತ್ಸವದೊಳಿರುತಿರ್ದನು
||೩೩||
ಇತ್ತಲಾರಣ್ಯದೊಳ್ತನ್ನ ವದನದೊಳಿರ್ದ
ವೃತ್ತ ಸಾಲಗ್ರಾಮ ಶಿಲೆಯಪ್ರಭಾವದಿಂ
ದುತ್ತಮಶ್ಲೋಕನಂ ಭಜಿಸ, ದಯೆಗೈದೆಡೆದ ಕಾಲ ಷಷ್ಠಾಂಗುಲಿಯನು ||
ಕತ್ತರಿಸಿಕೊಂಡುಳುಹಿ ಪೋದರಂತ್ಯಜರಾಗ
ತುತ್ತಿಸಿದ ರಾಹು ತೊಲಗಿದ ಶಶಿಯೊಲಿರ್ದನವ
ನೆತ್ತಣವು ಬಾಧೆಗಳ್ ನರ, ನಿನ್ನ ಮಿತ್ರನಂ ಮರೆಯೊಕ್ಕ ಜೀವಿಗಳ್ಗೆ ॥೩೪॥

‡ ತಂದಜಾಮಿಳ

ಬಸಿವ ನೆತ್ತರ ಗಾಯದೆಡದಡಿಯ ವೇದನೆಗೆ
ಪಸುಳೆ ಹರಿಹರಿಯೆಂದೊರಲ್ದಳುತಿರಲ್ಕಣ್ಣೊ
ಳೊಸರ್ವಬಾಷ್ಪಂಗಳಂ ಕಂಡು, ಮಿಗವಕ್ಕಿಗಳ್ನೊಂದು, ಕಡು ಶೋಕದಿಂದ॥
ವಸಿವು ನೀರಡಕೆಯುಂ ತೊರೆದಲ್ಲಿ ನಿಂದುಪಚ
ರಿಸುತಿರ್ದುವಾ ಶಿಶುವನೆಂದಡೆಲೆ ಪಾರ್ಥ ಕೇಳ್,
ವಸುಮತಿಯೊಳಾರ್ತರಂ ನೋಡಿ ಮಿಗೆ ಮರುಗದಿಹ ಮಾನವಂ
ಪಾಪಿಯಲ್ತೇ ? ॥೩೫॥

ಗರಿಗೆದರಿ ಕೊಡೆವಿಡಿದು ನಿಂದವು ಬಿಸಿಲ್ಗೆ ನವಿಲ್,
ಎರಕೆಯುಂ ಬೀಸಿ ಬಿಜ್ಜಣವಿಕ್ಕಿತಂಚೆ, ತಂ
ತುರನುದುರ್ಚಿತು ಸಾರಸಂ, ನಳಿಲದೊಳ್ನನವ ವಕ್ಕಂಗಳಂ ಬಿದಿರ್ಚಿ, ॥
ಮರುಗಿ ಮೆಲ್ನುಡಿಯೊಳುಪಚರಿಸಿದವು ಗಿಳಿಗಳ
ಕ್ಕರೊಳಳಿಗಳರ್ಭಕನ ರೋದನದ ಕೂಡಳುವ
ತೆರದೊಳ್ಮೊರೆದವಲ್ಲಿ, ಕರುಬರಿದ್ದೂರಿಂದ ಕಾಡೊಳ್ಕೆತೆನಿನುವಂತೆ ॥೩೬॥

ನಿಲ್ಲದೆ ನರಳ್ವ ಪಸುಳೆಯ ನಿರ್ಮಲಾಸ್ಯಮಂ
ಪುಲ್ಲೆಗಳ್ಕಂಡು ಕಾನನಕೆ ಕಾಮಿಸಿ ತಮ್ಮ
ನಲ್ಲನೈತರಲುಮ್ಮಳಿಸಿ ವಾಹನವನರಸ ಬಂದ ಪೂರ್ಣೇಂದುವೆಂದು ॥
ವಲ್ಲಭಸ್ವಾಮಿಯುಂ ಬೇಡಿಕೊಳುತಿರ್ದವೆನೆ
ಮೆಲ್ಲಮೆಲ್ಲನೆ ಪೊರೆಗೆ ಪೊರ್ದಿ ಬಾಲಕನಂಘ್ರಿ
ವಲ್ಲವದ ರುಧಿರಮಂ ಕುಡಿ ನಾಲಿಗೆಗಳಿಂದ ನೊಗನೆ ಲಿಹನಂಗೈದವು ॥೩೭॥

ಕೋಗಿಲೆಯ ನಿಡುಸರಂ, ಪಾರಿವದ ಕಲ್ಲುಣಿಸು,
ಗೂಗೆಗಳ ಕಣ್ಬೊಳಲು, ಬಕನ ಮೌನದ ಬೆರಗು,
ನಾಗರ ಸಿರಾಹಾರಮಳಿಗಳ ಪರಿಭ್ರಮಣವಿಭವ ಸೀತ್ಕಾರಂಗಳು ॥
ಪೋಗಲಡಿಯಿಡಲರಿಯದಾರ್ಕೈವ ಜನಮಿಲ್ಲ
ದಾ ಗಹನ ಗಂಹರದೊಳಳುವ ಶಿಶುವಂ ನೋಡ
ಲಾಗಿ ಬಂದೆಡೆಗೊಂಡ ದುಃಖಾತಿರೇಕವೆಂಬಂತೆ ಕಾಣಿಸುತಿರ್ದುದು ॥೩೮॥

ಬಾಲಕನ ರೋದನದ ಕೂಡೆ ಬನದೇವಿಯರ್
ಗಾಳಿ ತೀಡಿದಡೆ ಘೋರೆಂಬ ತರುಲತೆಗಳಿಂ
ಗೋಳಿಟ್ಟರಗ್ನಿ-ಜಲ-ಭೂ-ಗಗನ-ವಾಯು-ರವಿ-ಶಶಿಗಳೆಣ್ಬೆನೆವೆಂಗಳು ॥
ಹೇಳಲೇನಡವಿಯ ಚರಾಚರಂಗಳ ಜೀವ
ಜಾಲಂಗಳುರೆ ಮರುಗುತಿರ್ದವನಿತರೊಳೊಂದು
ಕೋಲಾಹಲದ ಘೋಷವೆಲ್ಲಿಯುಂ ಕಿವಿಗಿಡಿದುದಾ ಮಹಾಕಾನನ
ದೊಳು ॥೩೯॥

ದಿನಪನುಪಟಳದಿಂದ ನೆಲೆಗೆಟ್ಟು ಪಲವು ರೂ
ಪನೆ ತಾಳ್ದು, ವನವಾಸದುರುತಪದ ಸಿದ್ಧಿಯಿಂ
ಘನತೆಯಂ ಪಡೆದು, ಮಿಗೆ ಪಗೆಯಾದ ಪಗಲಾಂ ತೊಲಗಿಪಂಧಕಾರಮೆನಲು॥
ಅನುಪಮದ ಕಾರೊಡಲ ಬೇಡಪಡೆ ಬೇಂಟೆಗೆ ವಿ
ಪಿನದೊಳೈತರುತಿರ್ದುದಬ್ಬರದ ಬೊಬ್ಬೆಗಳ
ನಿನದದಿಂ ಜೀವಿಗಳ ಕೊಲೆಗೆಳಸಿದಂತಕನ ದೂತ ಸಂಘಾತದಂತೆ ॥೪೦॥

ತಪ್ಪತಪ್ಪಲೊಳಲ್ಲಿಗಲ್ಲಿ ಮಂಜುಗಳೆಸವ
ಕಪ್ಪಕಪ್ಪನೆಯ ಗಿರಿಗಳ ಪರ್ಬುಗೆಗಳಂತೆ
ಬಪ್ಪಬಪ್ಪೆಳನಾಯ್ಗಳಂ ಹಾಸೊಳಾಂತು ಬಂದುದು ಶಬರ ಸೇನೆ ಬಳಿಕ ॥
ಸೊಪ್ಪು ಸೊಪ್ಪುಗಳ ಮೆಳೆಮೆಳೆಗಳಂ ಸೋವುತ್ತ
ತಪ್ಪತಪ್ಪದೆ ಶರ ಶರಂಗಳಂ ತೆಗೆವೆಚ್ಚು
ದೊಪ್ಪದೊಪ್ಪನೆ ಮೃಗ ಮೃಗಂಗಳಂ ಕೆಡಹಿದರ್ ಕಾನನದೊಳೇವೇಳ್ವೆನು
॥೪೧॥

ಚಾಪ ಬಾಣಂಗಳೇತಕೆ ಬೇಂಟೆಗಂಗಜನ
ಚಾಪಬಾಣಂಗಳಿರ್ದಪವೆನ್ನೊಳೆಂಬೊಲಿಹ
ಚಾಪಲ ಭ್ರೂಲತೆಯ ಚಂಚಲಾಪಾಂಗದ ಪುಳಿಂದಿಯರ್ ತಮ್ಮ ತಮ್ಮ ॥
ಓಪರಂ ಬಳಿವಿಡಿದು ಬರುತಿರ್ದರಾಗ ಸ
ಲ್ಲಾಪದಿಂದೆಸವ ಹರಿ ಹರಿಣ ಕರಿ ಚಮರಿಗಳ
ರೂಪಂಗಳವಯವದೊಳಾರಾಜಿಸಲ್ಕವಕೆ ತಾವೆ ದೇಹಂಗಳೆನಲು ॥೪೨॥

ಸೊಕ್ಕಾನೆಗಳ ಸೊಗಡನುರ್ವ ಕಸ್ತೂರಿಯ ಮೃಗ
ದಿಕ್ಕೆಗಳನಲ್ಲಲ್ಲಿ ಪುಣುಗಿನ ಜವಾದಿಗಳ
ಚೆಕ್ಕೆಗಳ ಬಿಡೆಯದಾಡುಂಬೊಲನನರಸುಪ ಕಿರಾತರಂಗಚ್ಚವಿಗಳು ॥
ಅಕ್ಕರಿಂದವರವರ ನವ*ಪರಿಮಳಂಗಳ್ಗೆ
ತುಕ್ಕುವೆಳದುಂಬಿಗಳ ಬಳಗಂಗಳೆಂಬಂತೆ
ಪೊಕ್ಕುಪೊಕ್ಕಡವಿಯೊಳ್ಕಣ್ಗೆ ಕಾಣಿಸುತಿರ್ದವೇನೆಂಬೆನಚ್ಚರಿಯನು ॥೪೩॥
ಇದೆ ಪಂದಿ ಕೆದರಿದ ನೆಲಂ, ನೋಡಲಿದೆ ದಂತಿ
ಕದಡಿದ ಕೊಳಂ, ತೋರಲಿದೆ ಪುಲಿಯುಗಿದ ಮಿಗದ
ಮಿದುಳಿತ್ತಲಿದೆ ಸಿಂಗಮೆರಗಿದಾನೆಯ ತಲೆಯ ಮುತ್ತು ಮರಿ ನೆತ್ತರೊಡನೆ ॥
ಇದೆ ವನ ಮಹಿಷನುದ್ದಿಕೊಂಡ ಮರದಿಗುಡಿತ್ತ
ಲಿದೆಕೊ ನಾರಂಗಮಿಕ್ಕಡಿಗೈದ ಪಾವಿತ್ತ
ಲಿದೆ ಪುಲ್ಲೆಗಳ ಪಕ್ಕೆ ಮರಿಗಳಿಕ್ಕೆಗಳೆಂದು ಪರಿದರ್ ಪುಳಿಂದರಂದು ॥೪೪॥
ನಡೆ ಪಜ್ಜೆವಿಡಿ ಪೋಗು ತಡೆ ಸಿಲ್ಲು ಜಡಿ ಬೊಬ್ಬೆ
ಗೊಡು ಪೊದರೊಳಡಗು ಕೈಗೆಡದಿರೆಸು ನಿಡು ಸರಳ
ತೊಡು ಕೆಲಕೆ ಸಿಡಿಯದಿರ್ ಪೊಡೆ ಸಾರ್ಚು ತುಡುಕು ಮೊಗಸಡಗು
ಮರಕಡರೊಡರ್ಚು ॥
ಅಡಗಿಪ್ಪೊಯ್ ಬಡಿ ಕೋಲನಿಡು ಮುಂಗಡೆಗೆ ನಾಯ್
ಬಿಡು ಕೂಡೆ ಪಡಿತಳಿಸು ನೆಡೆಯದಿರ್ ಕೆಡಪೆಂಬ
ನುಡಿಗಳಡಿಗಡಿಗೆ ಕಿವಿಗಿಡಿದುವೆಲ್ಲೆಡೆಯೊಳಂದಡವಿಯೊಳ್ ಕಡು
ಪೊನತೆನೆ ॥೪೫॥
ಉಬ್ಬಿದುರದೇರದೆಗೆದೊಡಲ ಬಾಗಿದ ಬೆನ್ನ
ಪರ್ಬುಗೆಯ ಪಚ್ಚಳದ ನೆಡೆದ ಬಾಲದ ಕೊನೆಯ
ಕೊಬ್ಬಿದ ಕೊರಳ ಸಣ್ಣ ಜಂಘೆಗಳ ಕೊಂಕುಗುರ ಮಡಿಗಿವಿಯ ಕಿಡಿಗಂಗಳ॥
ಹೆಬ್ಬಲ್ಲ ಬಿಡುವಾಯ ನೇಲ್ವ ಕೆನ್ನಾಲಗೆಯ
ಗಬ್ಬಿನಾಯ್ಗಳ ಹಾಸನುಗಿದು ಬಿಡೆ ಪಂದಿಗಳ
ನಬ್ಬರಿಸಿ ತುಡುಕಿದವು ಕೇಸರಿಯ ಮೇಲ್ವಾಯ್ದುಡರ್ಚು ಪುಲಿಯಂ
ಕೊಂದವು ||೪೬||

* ತನು

ಬಿಡದೆ ಕುತ್ತುಗರ್ಗಳಂ ಸೋವಿದರ್ ತೀವಿದರ್
ಗಿಡುಗಳ ಪೊದರ್ಗಳಿಂದೆಬ್ಬಿಸಿದರುಬ್ಬಿಸಿದ
ರೊಡನೊಡನೆ ಖಗಮೃಗವ್ರಾತಮಂ ಪಾತಮಂ ಮಾಡಿದರ್ ಕೂಡೆ ಕೂಡೆ ||
ಪಿಡಿ ಗುಂಡು ಬಡಿ ಕೋಲ್ಗಳುರುಬೆಯಿಂದಿರುಬೆಯಿಂ
ಡಿಡುಗವಣೆ ನೇಣುರುಲ್ಗೋಲೆಗಳಿಂ ಬಲೆಗಳಿಂ
ಜಡಿದಾರ್ದು ಬೊಬ್ಬೆಯುಬ್ಬರದಿಂದ ಶರದಿಂದ ಕಾಡೊಳ್ ಕಿರಾತರಂದು ||೪೭||

ಕುತ್ತುರೊಳ್ಪುದುಗಿರ್ದ ಪುಲಿ ಪೊರಮಡಲ್ ಕಂಡು
ಕಿತ್ತು ಕೂರ್ಗಣೆಗಳಂ ಪೂಡಿ ಲುಬ್ಧಕರಿರ್ವರ್
ಇತ್ತತ್ತಲಿರ್ದ ಸರಿಸದೊಳೆಚ್ಚೊಡದರೊಡಲನುಚ್ಚಳಿಸಿದಂಬು ತಾಗಿ ||
ಇತ್ತಂಡಮಂ ವ್ಯಾಘ್ರದೊಡನಿಳೆಗೆ ಬಿದ್ದರು
ವೃತ್ತದಿಂದುಭಯ ಜನಮೇಕಾರ್ಥಕೆಳಸಿದಡೆ
ಮತ್ತೆ ಲೇಸಾಪವುದೆ? ಜಗದೊಳೀ ಮೂವರುಪಹತಿ ಚಿತ್ರಮಲ್ಲೆಂದನು ||೪೮||

ನಳಿತೋಳ ಬಲ್ಮೊಲೆಯ ಸೊಕ್ಕು ಜವ್ವನದ ಪರಿ
ಮಳ ಗಾತ್ರದಳಿಕುಂತಳದ ಮೆಲ್ನಡೆಯ ಶಬರಿ
ಹಳುವದೊಳ್ ತನ್ನ ಕಾಂತನ ಬಳಿಯ ಬರಲೊಂದು ಸಿಂಗಮತಿ ಭರದೊಳೆರಗಿ ||
ಬಳಿಕವಳ ಮಧ್ಯಮಂ ಕಂಡು ಸಾಮಾನ್ಯಮಂ
ತಳೆದು ಮತ್ತಾಕೆಯ ಚಲಾಪಾಂಗಮಂ ನೋಡಿ
ಮುಳಿದಡರಲಾ ಕೇಸರಿಯನೆಚ್ಚು ಕೆಡಹಿದಂ ಕ್ರೋಧದಿಂದಾ ವ್ಯಾಧನು ||೪೯||

ಮರಿಗೆ ಮರೆಯಾಗಿ ಮೈಯೊಡ್ಡಿ ಮಡಿದವು ಕೆಲವು,
ಬರಿಯ ಬಿಲ್ದನಿಗೆ ರಮಣನ ತಾಗಿತಂಬೆಂದು
ನೆರೆ ಮೋಹದಿಂ ಪೊರಳ್ದವು ಕೆಲವು, ಭಯಗೊಂಡೊಂದೊಂದೆಣೆಯನಗಲ್ದು ||
ಮರುಗಿ ಮದನಾಸ್ತ್ರದಿಂದಿರದೆ ಬಿದ್ದವು ಕೆಲವು,
ಬಿರುಸರಳ್ ತಮ್ಮ ಕೂಪರ ಮೇಲೆ ಬರಲದಕೆ
ಗುರಿಯಾಗಿ ತೊರೆದವಸುವಂ ಕೆಲವು ಪುಲ್ಲೆಗಳ್ ಬೇಡರೆಸುವೆಸುಗೆಯಿಂದ || ೫೦ ||

ಕರಿಯ ಕುಂಭಸ್ಥಳದ ಮುಕ್ತಾಫಲಂಗಳಂ,
ಬರುಹಿಗಳ ಗರಿಗಳಂ ಚಮರಿವಾಲಂಗಳಂ,
ದ್ವಿರದನವದಂತಾಂಕುರಂಗಳಂ, ಮೃಗನಾರ ಮೃತ್ತಿಕೆಗಳಂ, ಬನದೊಳು ॥
ಇರದೆತ್ತಿಕೊಂಡು ಬರುತಿರ್ದವರೊ ಶಬರಿಯರ್
ದರಹಾಸ ಕಬರಿ ಕುಂತಳ ಕುಚ ಶ್ಯಾಮ ತನು
ಪರಿಮಳಂಗಳನಾಂತು ಬಂದವರೊ ತಿಳಿಯಲರಿದೆಂಬಂತೆ ಕಾಣಿಸಿದುದು ||೫೧||

ಪುಲಿ ಕರಡಿ ಕರಿ ಸಿಂಗ ನಾರಂಗ ಮರೆ ಪಂದಿ
ಮೊಲ ಹುಲ್ಲೆ ಕಾಡೆಮ್ಮೆ ಚಮರಿಗಳ್ಮೊದಲಾದ
ಪಲವು ಮೃಗ ಜಾತಿಯ ಕ್ರೌಂಚ ಶಿಖಿ ತಿತ್ತಿರಿ ಕಪೋತಾದಿ ಪಕ್ಷಿಗಳನು ||
ಕೊಲುತ ಬಹ ಬೇಡರ್ಗೆ ಸಿಕ್ಕದೋಡಿದುದೊಂದೆ
ರಳೆ ಕುಳಿಂದಕನೆಂಬ ದೊರೆ ಕಂಡು ತನ್ನ ಚಾ
ಪಲಹಯದೊಳದರ ಬಳಿಸಂದನತಿವೇಗದಿಂ ಬಿಲ್ವಿಡಿದು ಕೊಲ್ವೆನೆಂದು॥೫೨॥

ಆ ಕುಳಿಂದಂ ದುಷ್ಟಬುದ್ಧಿಯ ನಿಯೋಗದಿಂ
ದಾ ಕಾನನದ ನಾಡವಳಿತಮಂ ಕೈಕೊಂಡು
ಭೂಕಾಂತನಾಗಿಹಂ ಚಂದನಾವತಿಯೆಂಬ ಪುರದೊಳವನರ್ಥಿಯಿಂದ ||
ಈ ಕಿರಾತಪ್ರಕರದೊಡನೆ ಪೊರಮಟ್ಟು ಮೃಗ
ಯಾಕಾಮನಾಗಿ ಬಂದಿರ್ದವಂ ಸಿಡಿದೋಡು
ವಾ ಕುರಂಗದ ಬೆನ್ನನೈದಿದಂ: ತೇಜಿಯ ಜವಂ ಗಾಳಿಯಂ ಮುಂಚಲು॥೫೩॥

ಹರಿಣನಂ ಬೆಂಬತ್ತಿ ಬರಲಾ ಕುಳಿಂದಕಂ,
ಹರಿಯನೇ ಜಪಿಸುತಳುತಿಹ ಬಾಲನಂ ಕಂಡು,
ಹರಿಯನಲ್ಲಿಯೆ ನಿಲಿಸಿ, ನೋಡಿ,ನಿಜ ಶಿರವನಲ್ಲಾಡಿ,ತಾಂ ಮೃಗದ ಕೊಲೆಗೆ॥
ಹರಿತಂದ ಪಾಪಮತಿ ಪುಣ್ಯಮೊದವಿಸಿತು, ವ್ಯವ
ಹರಿಸುವಡೆ, ಶಿವಶಿವಾ, ಪೊಸತೆಂದು ಹರುಷದ ಲ
ಹರಿಯೊಳೋಲಾಡಿದಂ: ಕಡವರನೆಡಹಿ ಸಂಧಿಸಿದ ಕಡು ಬಡವನಂತೆ ||೫೪||

ಇಳಿದು, ನಿಜ ವಾಜಿಯಂ ಸಾರ್ದು, ಪೈದಡವಿ, ಬರ
ಸೆಳೆದು, ಬಿಗಿಯಪ್ಪಿ, ಕಂಬನಿದೊಡದು, ಕೂಡೆ ಸ
ಗ್ಗಳೆಯ ನೀರಿಂದ ಕಾಲ್ದುದಿಯೊಳ್ಪಸಿವ ನೆತ್ತರಂ ತೊಳೆದು, ಮೋಹದಿಂದ ||
ಗಳದೊಳುಬ್ಬುವ ಗದ್ಗದಂಗಳಂ ಸೈಪಿಟ್ಟು
ತಿಳುಪಿ, ಲಾಲಿಸಿದಂ ಕುಳಿಂದಕಂ ಸೌಭಾಗ್ಯ
ನಿಳಯದರಕೆಯ ವಸುವನೊದವಿದಗ್ಗದ ಪುಣ್ಯದೊಡಲಸುವನಾ ಶಿಶುವನು
||೫೫||

ಎಡ ಬಲದೊಳಿಹ ತನ್ನನರೊಳಾ ಕುಳಿಂದಕಂ
ನುಡಿದನೀ ಬಾಲಕಂ ತನ್ನ ತಾಯ್ತಂದೆಗಳ
ನೊಡಹುಟ್ಟಿದವರ ಹಂಬಲಿಸದೆ ಮುರಾರಿಯಂ ನೆನೆವನದರಿಂದಿವಂಗೆ ||
ಒಡೆಯನಚ್ಯುತನಾದ ಕಾರಣಂ ಮೃತನಾಗ
ದಡವಿಯೊಳ್ ಜೀವಿಸಿವನೆಲ್ಲರ್ಗೆ ತನುಜರಂ
ಕೊಡುವವಂ ಕೃಷ್ಣನೈಸಲೆ ತನಗೆ ಮಕ್ಕಳಿಲ್ಲೀತನೇ ಸುತನೆಂದನು ||೫೬||

ಪತ್ತುವಿಧಮುಂಟು ಸುತರವರೊಳೌರಸಪುತ್ರ
ನುತ್ತಮಂ, ಮೇಣಾತನಿಲ್ಲದೆಡೆ ಮಿಕ್ಕವೊಂ
ಬತ್ತು ಬಗೆಯೊಳಗೊಂದು ತೆರೆದ ಮಗನಾದಡಂ ಬೇಕಲಾ ಮಾನವರ್ಗೆ, ॥
ತತ್ತನಯರೊಳ್ ತನ್ನತ ಌನೆ ದೊರೆಕೊಂಡವಂ
ದತ್ತನಂದನನಿವಂ ತನಗೆಂದವಂ ಮುದದೊ
ಳೆತ್ತಿಕೊಂಡಶ್ವವನಡರ್ದು ಪರಿಜನ ಸಹಿತ ನಿಜ ಪುರಕೆ ಬರುತಿರ್ದನು||೫೭||

ಮೃಗಯಾ ವ್ಯಸನದಿಂದ ಕಾನನಕೆ ತಾಂ ಕೃಷ್ಣ
ಮೃಗದೆರಕೆಗೈದಿದಡೆ ದೊರೆಕೊಂಡನೀ ಕೃಷ್ಣ
ಮೃಗಭಾವದರ್ಭಕಂ, ಪಾಪಕೆಳಸಿದೊಡಾಯ್ತು ಪುಣ್ಯಮೆನುತಲ್ಲಿ ಮಡಿದ ॥
ಮೃಗಜಾತಿಗಳನವರವರ್ಗೆ ವೆಚ್ಚಿಸಿ, ನೆರೆದ
ಮೃಗಜೀವಿಗಳನೆಲ್ಲರಂ ಕಳುಹಿ, ನಿಜ ಪುರಕೆ
ಮೃಗಧರನೊಲೆಸೆವ ಶಿಶುವಂ ಕೊಂಡು, ಪರಿಜನದೊಡನೆ ಬಂದನುತ್ಸವ
ದೊಳು ॥ ೫೮ ॥

ಮುಂದೆ ಪರಿತಂದು ಚರರರುವೆ ಸಿಂಗರಿಸಿದರ್
ಚಂದನಾವತಿಗೆ ಸಂಭ್ರಮದಿಂ ಕುಳಿಂದಕಂ
ಬಂದು, ನಿಜ ಭವನಮಂ ಪುಗಲಿದಿರ್ವಂದು, ನಲಿದವನ ಸತಿ ಮೇಧಾವಿನಿ ||
ಕಂದನಂ ತೆಗೆದೆತ್ತಿಕೊಳುತ, ಬಿಗಿಯಪ್ಪಿ, ಸಾ
ನಂದದಿಂ ಪೊರೆಯೇರಿದಳ್, ತನ್ನ ಬಂಜೆತನ
ಮಿಂದು ಪೋದುದು, ಪುತ್ರವತಿಯಾದೆನೆನ್ನ ಪುಣ್ಯದ್ರುಮಂ ಫಲಿಸಿತೆಂದು
||೫೯||

ಬಳಿಕ ನಗರದೊಳಾದುದುತ್ಸವಂ, ಪಾರ್ವರ್ಗೆ
ನಿಳಯದ ಸಮಸ್ತ ವಸ್ತುಗಳನೊಲಿದಿತ್ತನೊಂ
ದುಳಿಯದೆ, ವಿಹಿತ ಜಾತಕರ್ಮಮಂ ಮಾಡಿಸಲ್ಬುಧರುತ್ತರೋತ್ತರವನು ||
ತಿಳಿದು, ನಿರ್ಮಲ ಮುಖಾಂಬುಜದಿಂ ಶಶಾಂಕನಂ
ಕಳಕಳಿಸಿ ನಗುವನದರಿಂ ಚಂದ್ರಹಾಸನೆಂ
ದಿಳೆಯೋಳಿತಂಗೆ ಪೆಸರಾಗಲೆಂದುಚ್ಚರಿಸಿ ನಾಮಕರಣಂಗೈವರು ||೬೦||

ಪಸುಳೆತನದಂದಿಂದ ವೃದ್ಧಾಪ್ಯದನ್ನೆಗಂ
ಬಿಸಜನಾಭನ ಭಕ್ತಿ ದೊರೆಕೊಳದ ಮನುಜರಂ
ನಸುನಗುವ ಧವಳದೊಳ್ಪಿಂ ಚಂದ್ರಹಾಸನಿವನಖಿಳ ಭೂಮಂಡಲದೊಳು ||
ಪಸರಿಸುವ ಜಸದ ಬೆಳ್ಪಿಂ ಚಂದ್ರಹಾಸನಿವ
ನಸಮನಕ್ಷೀಣನಕಳಂಕನತಿಶಾಂತನೆಂ
ದಿಸವ ಸದ್ಗುಣದೇಳ್ಗೆಯಿಂ ಚಂದ್ರಹಾಸನಿವನೆಂದು ಬುಧರೊರೆದರಂದು||೬೧||

ಮಂಜುಮಹಿಮಾಸ್ಪದಂ, ಚಾರು ವೃತ್ತಂ, ಕಲಾ
ಪುಂಜಂ, ಸದಾನಭೋಗಂ, ಕುವಲಯಪ್ರಿಯಂ,
ರಂಜಿಸುವ ರಾಜನೆನ್ನವೊಲಾದಡಂ ಮಿತ್ರತೇಜಕಳವಳಿದು, ಪಗೆಯ ||
ಭಂಜನೆಗೆ ಸಿಕ್ಕಿ, ಬಡತನವಟ್ಟು, ಕಂದಿ, ಪಳಿ
ವಂ ಜಗವರಿಯೆ ಪೊತ್ತನೆಂದು ಬಿಡದಮೃತಾರ್ಚಿ
ಯಂ ಜರಿದು, ನಗುವನದರಿಂ ಚಂದ್ರಹಾಸನಿವನಹನೆನೆ ಪೆಸರ್ಮೆರೆದುದು
||೬೨||

ಕತ್ತಲೆಯ ಮನೆಗೆ ಮಣಿದೀಪವಾದಂತೆ, ಸಲೆ
ಬತ್ತಿದ ಸರೋವರಕೆ ನವ ಜಲಮೊದವಿದಂತೆ,
ಬಿತ್ತರದ ಕಾವ್ಯರಚನೆಗೆ ದೇವತಾಸ್ತುತಿ ನೆಗಳ್ದಂತೆ, ಭೂತಳದೊಳು ॥
ಮತ್ತೆ ಸಂತಾನಮಿಲ್ಲದ ಕುಳಿಂದನ ಬಾಳ್ಕೆ
ಗುತ್ತಮ ಕುಮಾರನಾದಂ ಚಂದ್ರಹಾಸನೆನ
ಲುತ್ತರೋತ್ತರಮಪ್ಪುದಚ್ಚರಿಯೆ ಸುರಪುರದ ಲಕ್ಷ್ಮೀವರನ ಶರಣರು ॥೬೩॥



## ೨೯ ನೆಯ ಸಂಧಿ

**ಮಂತ್ರಿ ಮತ್ಸರದಿಂದ ಮುಂದೆ ತಪ್ಪುವ ದೈವ**
**ಯಂತ್ರಭೇದವನರಿಯದಿಂದುಹಾಸನ ಮೇಲೆ**
**ತಂತ್ರಮಂ ಪಣ್ಣಿ, ಕೊಲಿಸುವೆನೆಂದು, ಕಳುಹಿದಂ**
**ಕುಂತಳೇಂದ್ರನ ನಗರಿಗೆ ॥**

ಧ್ರುವನಂಬರಸ್ಥಳದೊಳ್, ಅಸ್ಮತ್ಪಿತಾಮಹಂ
ದಿವದೊಳ್, ವಿಭೀಷಣಂ ಲಂಕೆಯೊಳ್, ಪಾತಾಳ
ಭುವನದೊಳ್ ಬಲಿ,ವಿಷ್ಣುಭಕ್ತರಂ ಕಾಣ್ಬರಾರೀ ಚಂದ್ರಹಾಸನಿಂದ ॥
ಅವನಿ ಪಾವನಮಪ್ಪುದಾತನಂ, ಸಂಧಿಸುವ
ಲವಲವಿಕೆಯಾಗಿರ್ಪುದೆಲೆ ತಪೋಧನ, ತನಗೆ
ವಿವರಿಸುತ್ತರ–ಕಥೆಯನೆಂದರ್ಜುನಂ ಕೇಳ್ದಡಾ ಮುನಿಪನಿಂತೆಂದನು ॥೧॥

ಆಲಿಸೆಲೆ ಫಲುಗುಣ, ಕುಳಿಂದಕನ ಭವನದೊಳ್,
ಬಾಲಕಂ ಪೆರ್ಚುವ, ಸುಧಾಂಶು ಕಳೆಯುಂ ನಗುವ
ಲೀಲೆಯುಂ, ಚಂದ್ರ–ಹಾಸಂ ತಪ್ಪದೆಂಬಂತೆ ದಿನದಿನಕೆ ವರ್ಧಿಸುತಿರೆ ||
ಮೇಲೆಮೇಲೆಸೆದುದಾವ್ರೊಳಲ ಸಿರಿ, ವಿಮಲ ಗುಣ
ಶೀಲದಿಂ ಮೆರೆದುದೆಲ್ಲಾ ಜನಂ, ಬಿಡದೆ ಕೊಡ
ವಾಲಂ ಕರೆದುವಾಕಳುತ್ತು ಬಿತ್ತದೆ ಬೆಳೆಯುತೊಡಗಿತಿಳೆ ಮಳೆಗಳಿಂದ ||೨||

ಸೂಚಿತದ ಪೂರ್ವಜನ್ಮದ ಪುಣ್ಯ ಫಲದಿಂದ-
ಯಾಚಿತದೊಳನುಪಮದ ಶಿಶುನಿಧಾನಂ ತನಗೆ
ಗೋಚರಿಸಿತೆಂದು, ನಲಿದಾ ಕುಳಿಂದನುಮವನ ರಾಣಿಯುಂ ದಿನದಿನದೊಳು ||
ಲೋಚನಂ ದಣಿಯೆ ನೋಡುತ, ಹರುಷವಾರಿಧಿಯ
ವೀಚಿಯೊಳ್ಮುಳುಗಾಡಿ, ಪುತ್ರವಾತ್ಸಲ್ಯದಿಂ
ದಾ ಚಂದ್ರಹಾಸನಭ್ಯುದಯದೊಳ್ಪೆರ್ಚಿದರನೇಕ ಸಂವದವೊದವಲು ||೩||

ಲಕ್ಷಣದೊಳೆಸವ ಸುಕುಮಾರನಂ ನಗರಿಗ
ಧ್ಯಕ್ಷನಾಗಿಹ ಕುಳಿಂದಂ ಕೆಲವು ದಿನದ ಮೇ
ಲಕ್ಷರಾಭ್ಯಾಸಕಿರಿಸಿದಡೆ, ಹರಿಯೆಂಬೆರಡೆ‡ ವರ್ಣಮಲ್ಲದೆ ಪೆರತನು ||
ಅಕ್ಷಿಯಿಂದೀಕ್ಷಿಸದೆ ವಾಚಿಸದಿರಲ್ಕೆ, ಗುರು
ಶಿಕ್ಷಿಸಿ, ಕನಲ್ದು, ಬರೆಯುಂದಡಂ ಕೇಳದಿರೆ,
ತತ್‌ಕ್ಷಣದೊಳಾತನೈತಂದವನ ತಾತಂಗದಂ ವೇಳ್ದಡಿಂತೆಂದನು ||೪||

ಈತನೇಕಾದಶಿಯೊಳುಪವಾಸಮಂ ಮಾಡ
ಲೀತನಂ ಕಂಡು, ನಾವೆಲ್ಲರುಮನುಷ್ಠಿಸುವೆ
ವೀತನಚ್ಯುತ ಭಕ್ತನೀತನಿಂದೆನಗಪ್ಪುದಭ್ಯುದಯಮಿಹ ಪರದೊಳು ||
ಈತನಲ್ಲದೆ ಬೇರೆ ತನುಜಾತರಿಲ್ಲ ತನ
ಗೀತನಲ್ಲದೆ ಜೀವಮಾಗಿರ್ಪನಾನದರಿ
ನೀತನೆಂತಾದಡಿರಲೀತಂಗೆ ಶಿಕ್ಷೆ ಬೇಡೆಂದು ಕುಳಿಂದನಂದು ||೫||

‡ ಬೆರಡು

ಅಂದು ಮೊದಲಾಗಿ ತನ್ನಿಚ್ಛೆಯಿಂ ಚಂದ್ರಹಾ
ಸಂ ದಾನವಾರಿಯಂ ಬಿಡದೆ, ಬಾಲಕ್ರೀಡೆ
ಯಿಂದುತ್ಸವಂಗಳಂ ಮಾಡಿ, ಕೆಳೆಯರ್ವೆರಸಿ ಕೊಂಡಾಡಿ ಭಕ್ತಿಯಿಂದ ॥
ತಂದು ಫಲವ†ಲರ್ಗಳಂ ಪೂಜೆಗೈದುಪವಾಸ
ದೀದ ಜಾಗರಣದಿಂದೇಕಾದಶೀವ್ರತವ
ನಂದದಿಂದಾಚರಿಪನಖಿಳ ಜನಕುಪದೇಶಿಪಂತೆ ಹರಿಮಹಿಮೆಗಳನು ||೬||

ಮೆಲ್ಲನಿಂತಿರಲೆಂಟನೆಯ ವರುಷಮಾಗಲ್ಕೆ
ನಿಲ್ಲದುಪನಯನಮಂ ವಿರಚಿಸಿ, ಕುಳಿಂದಂ ಸ
ಮುಲ್ಲಾಸಮಂ ತಾಳ್ದನಂಗಸಹಿತಖಿಳ ವೇದಂಗಳಂ ನೀತಿಗಳನು ||
ಸಲ್ಲಲಿತ ಶಬ್ದಾದಿ ಶಾಸ್ತ್ರ ಸಿದ್ಧಾಂತಂಗ
ಳೆಲ್ಲಮಂ ಗುರುಮುಖದೊಳನುಕರಿಸಿ, ಬೇಕಾದ
ಬಿಲ್ಲ ವಿದ್ಯೆಯನರಿದು, ಗಜ–ತುರಗದೇರಾಟದೊಳ್ ಚತುರನಾದನವನು॥೭॥

ವಿದಿತ ವೇದಾರ್ಥಮಂ ವಿಷ್ಣುವೆಂದರಿದು, ಬಹು
ವಿಧ ಶಾಸ್ತ್ರತತಿ ಹರಿಯೆ ಗತಿಯೆಂದು ತಿಳಿದು, ತಾ
ನಧಿಕರಿಸಿ, ಬಳಿಕ ನಿಜ ಭಕ್ತಿಚಾಪಕೆ ಸತ್ವಗುಣವನಳವಡಿಸಿ, ತನ್ನ ॥
ಸುಧಿಯ ಶರಮಂ ಮಾಡಿ, ಕೃಷ್ಣನಂ ಗುರಿಮಾಡಿ,
ವಿಧುಹಾಸನನುಪಮ ಧನುರ್ವಿದ್ಯೆಯಂ ಜಗದೊ
ಳಧಿಕತರಮಾಗೆ ಸಾಧಿಸಿ, ಪರಮಭಾಗವತಕಲೆಗಳಿಂದೆಸೆದಿರ್ದನು ॥೮॥

ಷೋಡಶಪ್ರಾಯದೊಳವಂ ಪ್ರಬಲಬಲನಾಗಿ,
ಮೂಡದಗ್ಗಳಿಕೆಯಿಂದೈದೆ ರಥಿಕರ್ಕಳಂ
ಕೂಡಿಕೊಂಡೈಯ್ದಿ, ನಿಜ ತಾತಂಗೆ ಮಲೆವ ಮನ್ನೆಯರೆಲ್ಲರಂ ಘಾತಿಸಿ ॥
ಮಾಡಿದಂ ದಿಗ್ವಿಜಯಮಂ, ಕುಳಿಂದಕನಾಳ್ವ
ನಾಡಲ್ಲದೆಣ್ದೆಸೆಯ ಸೀಮೆಗಳನೊತ್ತಿದಂ,
ಪೂಡಿಸಿದನವರವರ ಮನೆಗಳ ಸುವಸ್ತುಜಾಲಂಗಳಂ ತನ್ನ ಪುರಕೆ ||೯||

---

† ವರ್ಗಮಂ

ಹರಿಯನಾರಾಧಿಸದೆ ರಾಜ್ಯಮದದಿಂ ಸೊಕ್ಕಿ-
ದರಿ ಭೂಪರಂ ಗೆಲ್ದು, ಮಣಿ ಕನಕ ಮುಕ್ತಾಳಿ
ಕರಿ ತುರಗ ಮೊದಲಾದ ಮುಖ್ಯ ವಸ್ತುಪ್ರತತಿ ನಹಿತ ಪಟ್ಟಣಕೆ ಒರಲ್ದು,||
ಪುರದ ಸಿಂಗರದ, ಮಂಗಳವಾದ್ಯರವದಬಲೆ
ಯರ ಸೊಡರ್ವೆಳಗಿನಾಳತಿಗಳ, ಮಹೋತ್ಸವದ
ಸಿರಿಯೊಳ್ಕಳಿಂದಂ ಕುಮಾರನನಿದಿರ್ಗೊಳಿಸಿ ಮತ್ತೆ ಕಾಣಿಸಿಕೊಂಡನು||೧೦||

ತಾಯಿ ತಂದೆಗಳೀಗಳಿಂದಿರಾದೇವಿ ನಾ
ರಾಯಣರ್ ತನಗೆಂದು ಭಾವಿಸಿ ನಮಿಸಲವರ್
ಪ್ರೀಯದಿಂ ತನಯನಂ ತೆಗದಪ್ಪಿದರ್, ಬಳಿಕ ಪುರಬೀದಿಯೊಳ್ಬರುತಿರೆ ||
ಆಯತಾಕ್ಷಿಯರೆಲ್ಲರಲರ್ಗಳಂ ಚೆಲ್ಲಿದರ್
ಕಾಯಜಾಕೃತಿಯೊಳ್ಪೆತಹ ಚಂದ್ರಹಾಸನ ವಿ
ಡಾಯಮಂ ನೋಡುವ ಕಟಾಕ್ಷದ ಮರೀಚಿಗಳ ವೀಚಿಗಳ ನಿಕರದೊಡನೆ
||೧೧||

ನಿಳಯಕ್ಕೈತಂದನುತ್ಸವದಿಂ ಕುಳಿಂದಕಂ,
ಬಳಿಕ, ತನ್ನಾಧಿಪತ್ಯವನಾತ್ಮಜಂಗೆ ಮಂ
ಗಳ ಮುಹೂರ್ತದೊಳಿತ್ತನಂದಿನಿಂ ಚಂದ್ರಹಾಸಂ ಪಾಲಿಸುವನಿಳೆಯನು ||
ತುಳುಕಾಡಿತಾ ನಾಡಸಿರಿ, ಚಂದನಾವತಿಯ
ವೊಳಲ ಸೌಭಾಗ್ಯಮಭಿವರ್ಧಿಸಿತು, ವೈಷ್ಣವರ
*ಬೆಳವಿಗೆಗಳಾದವೆಲ್ಲಾ ಜನದೊಳಾಚಾರ-ಗುಣದಾನ ಧರ್ಮದಿಂದ ||೧೨||

ದಶಮಿಯ ಮಹೋತ್ಸವಂ ಪೆರ್ಚಿತೇಕಾದಶಿಯೊಳ್
ಅಶನಮಂ ತೊರೆದರಚ್ಯುತ ಪರಾಯಣರಾಗಿ
ನಿಶಿಯೊಳ್ ನಿರಂತರಂ ನಿದ್ರೆಯಂ ಬಿಟ್ಟರಾ ಮರುದಿನಂ ದ್ವಾದಶಿಯೊಳು ||
ಕುಶಶಯನ ಪೂಜೆಯಂ ಮಾಡಿ, ಭುಂಜಿಪರಿಂತ
ತಿಶಯಮಾದುದು, ಮೇಲೆ ಮೇಲೆ ಮಾಧವಭಕ್ತಿ
ವಿಶದ ಗುಣನಿಧಿ ಚಂದ್ರಹಾಸನಾಜ್ಞೆಯೊಳವನ ದೇಶದ ಸಮಸ್ತಜನಕೆ ||೧೩||

* ಬೆಳವಳಿಗೆಯಾದುದೆಲ್ಲಾ

ಜಲಜಾಕ್ಷ ಭಕ್ತಿಯಿಂ ಪ್ರಹ್ಲಾದನಾಗಿ, ನಿ
ಶ್ಚಲ ಹರಿಧ್ಯಾನದಿಂ ಧ್ರುವನಾಗಿ, ಸತ್ತ್ವದಿಂ
ಬಲಿಯಾಗಿ, ಶಾಂತತ್ವದಿಂ ವಿಭೀಷಣನಾಗಿ, ವೈಷ್ಣವಾಭರಣನೆಂಬ ॥
ಕಲೆಯಿಂದ ಮಹಿಗೆ ರುಕ್ಮಾಂಗದಂ ತಾನಾಗಿ,
ಸಲೆ ಕೀರ್ತಿಯಿಂ ಪುಂಡರೀಕನಾಗಿರುತಿಹಂ
ಸುಲಲಿತ ಚರಿತ ಭಾಗವತಶಿರೋಮಣಿ ಚಂದ್ರಹಾಸನುರ್ವೀತಳದೊಳು॥೧೪॥

ರೂಪಿಂದ ಮದನನುಂ, ನಾರಿಯರುಮಮಿತಪ್ರ
ತಾಪದಿಂ ದಿನಪನುಂ, ಪರ ಮಹೀಪಾಲರುಂ
ವ್ಯಾಪಿಸಿದ ಕೀರ್ತಿಯಿಂ ಪಿಯೂಷಕಿರಣನುಂ ತಾರೆಗಳುಮಭಿವರ್ಧಿಪ ॥
ಶ್ರೀಪತಿಯ ಭಕ್ತಿಯಿಂ ಗರುಡನುಂ, ಸನಕಾದಿ
ತಾಪಸರುಮೈದೆ ಸೋಲ್ವವರೆಂದಡಿನ್ನುಳಿದ
ಕಾಪುರುಷರೀ ಚಂದ್ರಹಾಸನಂ ಪೋಲ್ವಪರೆ ಪೇಳೆಂದು ಮುನಿ ನುಡಿದನು ||೧೫||

ಈ ತೆರದೊಳಿರೆ ಕುಳಿಂದಂ ಚಂದ್ರಹಾಸನಂ
ಪ್ರೀತಿಯಿಂದಂ ಕರೆದು ನುಡಿದನೆಲೆ ಮಗನೆ, ವಿ
ಖ್ಯಾತವಾಗಿಹ ರಾಜಧಾನಿ ಕುಂತಳಮಿಲ್ಲಿಗಾರು ಯೋಜನದೊಳಿಹುದು ॥
ಭೂತಳವಿದಾ ನಗರದರಸಿನದು, ನಮಗೊಡೆಯ
ನಾತನ ಶಿರಃಪ್ರಧಾನಂ ದುಷ್ಟಬುದ್ಧಿ, ಸಂ
ಜಾತ ವಸ್ತುಗಳ ಸಿದ್ಧಾಯಮಂ ಕೊಡವೇಳ್ಪುದರಮನೆಗೆ ನಾವೆಂದನು॥೧೬॥

ರಾಯಂಗೆ ವರುಷ ವರುಷಕೆ ನಾವು ಕೊಡು*ವ ಸಿ-
ದ್ಧಾಯಮಂ, ದುಷ್ಟಬುದ್ಧಿಗೆ ಸಲಿಸಿ ಬಪ್ಪ ನಿ
ಷ್ಕಾಯತ ದ್ರವ್ಯಮಂ, ನೃಪನ ರಾಣಿಗೆ ಪುರೋಹಿತನಾದ ಗಾಲವಂಗೆ ||
ಪ್ರೀಯದಿಂದುಪಚರಿಸುವರ್ಥಮಂ, ತತ್ಕಾಲ
ಕೀಯಬೇಕೆಲೆ ಮಗನೆ, ಧನವನೊದವಿಸಿ ಕ‡ಳುಹ
ಸೂಯೆಗೀಡಾಗಬೇಡೆಂದು ನಿಜನಂದನಂಗಾ ಕುಳಿಂದಂ ನುಡಿದನು ||೧೭||

ತೆರುವ ‡ ಕಳುಹಲೀಯದಡೆ ಕೇಡುಬಹದೆಂದು

ಪಿತನ ಮಾತಂ ಕೇಳ್ದು, ಚಂದ್ರಹಾಸಂ ಮಹೀ
ಪತಿಗೆ, ಮಹಿಷಿಗೆ, ಮಂತ್ರಿ ದುಷ್ಟಬುದ್ಧಿಗೆ, ಪುರೋ
ಹಿತ ಗಾಲವಂಗೆ, ಸಲಿಸುವ ಧನವನದರ ಸಂಗಡಕೆ ತಾನಾಹವದೊಳು ॥
ಪ್ರತಿಭೂಪರಂ ಜಯಿಸಿ ತಂದ ವಸ್ತುಗಳನಂ-
ಕಿತದಿಂದ ಕಟ್ಟಿ, ಶಕಟೋಷ್ಟ್ರ ಕರಿಗಳ ಭಾರ
ಶತ ಸಂಖ್ಯೆಯಿಂದ ಕಳುಹಿದನಾಪ್ತರಂ ಕೂಡಿ ಕೊಟ್ಟು ಕುಂತಳನಗರಿಗೆ॥೧೮॥

ಹಸ್ತಿ ಹಯ ವಸ್ತ್ರರತ್ನಾಭರಣ ಕರ್ಪೂರ
ಕಸ್ತುರಿ ಮಲಯಜ ಸುವರ್ಣ ರಜತಾದ್ಯಖಿಳ
ವಸ್ತು ಚಯಮಂ ಕೊಂಡು, ಚಂದ್ರಹಾಸನ ಚರರ್ ಕುಂತಳಪುರಕ್ಕೆ ಬಂದು॥
ವಿಸ್ತಾರದಿಂದೆಸೆವ ನಗರೋಪಕಂಠದ ಸ
ರಸ್ತೀರದೊಳ್ ಮಿಂದು, ಚಕ್ರಿಯಂ ಪೂಜೆಗೈ
ದಸ್ತಮಯ ಸಮಯದೊಳ್ಪೊಕ್ಕರಾ ಪಟ್ಟಣವನತಿ ಶುಚಿಭೂರ್ತರಾಗಿ ॥೧೯॥

ನೊಸಲೊಳೆಸೆವೂರ್ಧ್ವ ಪುಂಡ್ರದ, ಸುಧೌತಾಂಬರದ,
ಮಿಸುಪ ತುಳಸಿಯ ದಂಡೆಗಳ ಕೊರಳ, ಸ್ವಚ್ಛತರ
ದಶನ ಪಂಕ್ತಿಯ,*ನಕಿಲ್ಬಿಷ ಗಾತ್ರದಚ್ಚ ಸಾತ್ವಿಕಭಾವದಿಂದ ಮೆರೆವ ॥
ಶಶಿಹಾಸನನುಚರರ್ ಬಂದು ಕಾಣಲ್ಕಿದೇಂ
ಪೊಸತಕಟ ! ನಿಮಗೀಗಳೇಕೆ ಶುದ್ಧ ಸ್ನಾನ
ಮಸುವಿಡಿದಿಹನೆ ಕುಳಿಂದಕನೆಂದು ಶಂಕೆಯಿಂ ಕೇಳ್ದನಾ ದುಷ್ಟಬುದ್ಧಿ
॥ ೨೦ ॥

ಅಶುಭಕೋಟಿಯನೊರಸುವೇಕಾದಶೀ ವ್ರತಕೆ
ವಿಶದ ಸಲಿಲಸ್ನಾನವಿಂದೆಮಗೆ ಸಮನಿಸಿತು,
ಕುಶಲದಿಂ ಬಾಳ್ವಂ ಕುಳಿಂದನಾತನ ಸೂನು ಚಂದ್ರಹಾಸಂಗೆ ನಾಡು ॥
ವಶವರ್ತಿಯಾಗಿರ್ಪುದವನಾಜ್ಞೆಯಿಂದುಭಯ
ದಶಮಿಯೊಳ್ನಡೆವುದುತ್ಸವಮಚ್ಯುತಂಗೆ ಕ
ರ್ಕಶಮಿಲ್ಲದಖಿಳ ಜನಮಂ ಬಿಡದೆ ಪಾಲಿಸಂ ಹರಿಭಕ್ತನಿರತನಾಗಿ ॥೨೧॥

* ವಿಕಿಲ್ಬಿಷ

ಸುತ್ತಲುಂ ದಿಗ್ವಿಜಯಮುಂ ಮಾಡಿ, ರಿಪು ನೃಪರ
ನೊತ್ತಿ ಭುಜಬಲದಿಂದ, ಕಪ್ಪಮುಂ ಕೊಂಡು, ಬಂ
ದುತ್ತಮ ಸುವಸ್ತುಗಳನೆಂದುಮಿೂವರ್ಥಮುಂ ಚಂದ್ರಹಾಸಂ ಕಳುಹಲು ||
ಪೊತ್ತು ತಂದಿಹುದನೇಕ ದ್ರವ್ಯವರಮನೆಗೆ
ಹತ್ತು, ನಿಮಗೊಂದರೆಣಿಕೆಯೊಳೆಂದು ಲೇಖನವ
ನಿತ್ತಡೆ, ಕುಳಿಂದಕನ ಸೇವಕರ್ಗಾ ದುಷ್ಟಬುದ್ಧಿ ಮಗುಳಿಂತೆಂದನು ||೨೨||

ಏನಿದೆತ್ತಣ ಕೌತುಕದ ನುಡಿ, ಕುಳಿಂದಂಗೆ
ಸೂನು ಜನಿಸಿರ್ದವನೆ ! ಬಂಜೆಯಾಗಿಹಳವನ
ಮಾನಿನಿ, ವಿಚಿತ್ರಮೆನಲಾ ಚರರ್ ಜೀಯ, ಪುಸಿ†ಯಲ್ಲವಂ ಬೇಂಟೆಗೈದಿ ||
ಕಾನನದ ಮಧ್ಯದೊಳನಾಥನಾಗಿಹ ಶಿಶುನಿ
ಧಾನಮಿರೆ ಕಂಡೆತ್ತಿಕೊಂಡು ಬಂದಾತ್ಮಜ ವಿ
ಧಾನದಿಂದೋವಿದಂ, ಪ್ರೀತಿ ಮಿಗೆ ಚಂದ್ರಹಾಸಾಭಿಧಾನದೊಳೆಂದರು||೨೩||

ಕೇಳಿ ವಿಸ್ಮಿತನಾದನಾ ದುಷ್ಟಬುದ್ಧಿ, ನಾಂ
ವಾಳಡವಿಯೊಳ್ ವಸುಳೆಯಂ ಕೊಂದು ಬಹದೆಂದು
ಹೇಳಿದಡೆ, ಚಂಡಾಲರಂದುಳಿಹಿ ಬಂದರಹುದೆಂದು ನಿಶ್ಚೈಸಿ, ಬಳಿಕ ||
ತಾಳಿದಂ ದ್ವೇಷಮುಂ ಚಿತ್ತದೊಳ್, ಪೊರಗೆ ಕರು
ಣಾಳುಗಳ ತೆರದಿಂದವರ್ಗಳಂ ಮನ್ನಿಸಿ, ನಿ
ಜಾಲಯಕೆ ತೆಗಸಿದಂ ಚಂದ್ರಹಾಸಂ ಕಳುಹಿದಗಣಿತ ಸುವಸ್ತುಗಳನು ||೨೪||

ಇಂದುಹಾಸನ ದೂತರುಪವಾಸವಿರಬಾರ
ದೆಂದು, ಬಾಣಸಿಗರಂ ಕರಸಿ, ಬಹುವಿಧ ಪಾಕ
ದಿಂದ ಷಡುರಸ ಭೋಜ್ಯಮುಂ ಮಾಡಿಸಿದರೂಟಕವರೊಲ್ಲೆವೆನೆ ಕನಲ್ದು ||
ಎಂದಿನಂತಲ್ಲ ಗರ್ವಿಸಿದಂ ಕುಳಿಂದನವ
ನಿಂದ ಸೊಕ್ಕಿದರವನ ಭೃತ್ಯರಿವರೆಲ್ಲರಂ
ತಂದು ಕಾರಾಗಾರದೊಳ್ನಿಗಳಮುಂ ಪೂಡಿಸುವೆನೆಂದನಾ ಸಚಿವನು ||೨೫||

---

† ಪೊಸತಲ್ಲವಂ

ಕಷ್ಟವೇಕಕೆಲೆ ಜೀಯ, ಹರಿವಾಸರ ವ್ರತ
ಭ್ರಷ್ಟರಾದಪೆವೆಂಬ ಭಯಕೆ, ನಿನ್ನಾಲಯದ
ಮೃಷ್ಟಾನ್ನಕಾವೊಲ್ಲದಿರ್ದೆವೈಸಲೆ, ಗರ್ವದಿಂದ ವೆರತಲ್ಲವೆಂದು ॥
ದುಷ್ಟಬುದ್ಧಿಯ ಚಿತ್ತಮಂ ತಿಳುಪಿ, ಮರುದಿನಮೊ
ಳಿಷ್ಟ ಭೋಜನದಿಂದ ಸನ್ಮಾನಮಂ ತಳೆದು,
ಹೃಷ್ಟಮಾನಸರಾಗಿ ಬೀಳ್ಕೊಂಡು ತಿರುಗಿದರ್ ಚಂದ್ರಹಾಸನ ದೂತರು ||೨೬||

ಮನ್ನಿಸಿ ಕುಳಿಂದಕನ ಚರರಂ ಕಳುಹಿ, ಮಂತ್ರ
ಭಿನ್ನವಾಗದವೊಲರಮನೆಗೆ ಬಂದಾಗ ತಾ
ನುನ್ನಿಸಿದ ಬಗೆಯನಾಳೋಚಿಸಿ, ನೃಪಾಲನಂ ಬೀಳ್ಕೊಂಡು, ಮದನನೆಂಬ॥
ತನ್ನ ತನಯನ ಮೇಲೆ ರಾಜಕಾರ್ಯದ ಭಾರ
ಮನ್ನಿಯೋಗಿಸಿ, ದುಷ್ಟಬುದ್ಧಿ ಮೊರಮಡುತಿರ್ದ
ನನ್ನೆಗಂ, ವಿಷಯಾಭಿಧಾನದಿಂದೆಸವ ನಿಜಸುತೆ ಭರದೊಳೈತಂದಳು ॥೨೭॥

ತನು ಸೊಂಪಡರ್ದು ನುಂಪಿಡಿದು ಕಂಪೊಗೆಯೆ, ಲೋ
ಚನದ ನೋಟದ ಹೊಳಹು ಹೊಡಕರಿಸೆ, ಚೆಲ್ವ ಕದ
ಪಿನ ಕಾಂತಿ ಕಳಕಳಿಸೆ, ನಸುಲಜ್ಜೆ ನಗೆಮೊಗದೊಳಂಕುರಿಸೆ, ತನಿಸೊಬಗಿನ||
ವನಜ ಕುಟ್ಮಲದಂತೆ ಕುಚಯುಗಂ ಪೊಣ್ಮೆ ಬಡ
ತನದಿಂದ ನಡು‡ನವಿಯೆ, ಗತಿ ಮಂದಮಾಗೆ, ಜೌ
ವನದೇಳ್ಗೆಯಿಂದೆಸವ ವಿಷಯೆ, ನಿಜ ತಾತನ ಸಮೀಪಕ್ಕೈತರುತಿರ್ದಳು ॥೨೮॥

ಎಸಳುಗಂಗಳ ದಿಟ್ಟೆ, ಮನ್ಮಥನ ಕರದಿಟ್ಟೆ,
ಮಿಸುಪ ಪುರ್ಬಿನ ಗಾಡಿ, ದರ್ಪಕನ ಸಿಂಗಾಡಿ,
ಲಸಿತ ಮಂದಸ್ಮಿತಂ, ಮುನಿಜನದ ವಿಸ್ಮಿತಂ, ಕುರುಳು ವಿಟನಿಕರಕುರುಳು ॥
ಆಸಿಯ ಕೋಮಲಕಾಯಮಂಗಜೋತ್ಸವಕಾಯ
ಮೆಸವ ನವ ಯೌವನಂ, ಸ್ಮರನ ಕೇಳೀವನಂ,
ಪೊಸತಿದೆನಲಾ ವಿಷಯೆ ಜನಿತಮೋಹನವಿಷಯೆ, ಪಿತನೆಡೆಗೆ ನಡೆತಂದಳು ॥೨೯॥

---

‡ ನಡುವೆಸೆಯೆ,

ಕನ್ನೆವೆಣ್ಗಳ ಕೆಳದಿಯರ ಕೂಡೆ ಶೈಶವ್ರೋ
ಛ್ಛಿನ್ನ ಯೌವನೆಯಾದ ವಿಷಯೆ ಬರೆ, ಕಂಡಿವ
ಳ್ಗಿನ್ನು ವರನಾಗಬೇಕೆಂದು ಚಿಂತಿಸಿ ಮನದೊಳಾ ದುಷ್ಟಬುದ್ಧಿ ಒಳಿಕ ||
ತನ್ನ ಮಗಳಂ ತೆಗೆದು ತಕ್ಕೈಸಿ, ವಾತ್ಸಲ್ಯ
ದಿನ್ನಾಳೆ ಬಂದೆವೆಂ ಪೋಗು ನಿಜ ಭವನಕೆನೆ,
ಸನ್ನುತ ವಸಂತದೊಳ್ ಬಾಯ್ದೆರೆವ ಕೋಗಿಲೆಯ ಮರಿಯೊಲವಳಿಂತೆಂದಳು ||೩೦||

ತಾತ, ನಂದನದೊಳಾಂ ನೀರ್ವೊಯ್ದು ಬೆಳೆಯಿಸಿದ
ಚೂತಲತೆ ಕಾತುದಿನ್ನುದ್ಯಾಪನಂಗೈಸ
ದೇತಕಿರ್ದಪೆ ? ರಾಜಕಾರ್ಯಮೇನೆಂದು ತಲೆವಾಗಿ ನಸುಲಜ್ಜೆಯಿಂದ ||
ಮಾತನಾಡುವ ಮಗಳ ಭಾವಮಂ ಕಂಡು, ಸಂ
ಪ್ರೀತಿಯಿಂ ತೀಪಿಸಿ, ಮೈದಡವಿ, ಮುದ್ದಿಸಿ, ತನ್ನ
ಜಾತ ಮದನಂಗಿವಳ ನೋಂಪಿಯಂ ಮಾಡಿಸೆಂದಾ ಮಂತ್ರಿ ನೇಮಿಸಿದನು ||೩೧||

ಮನೆಗೆ ಮಗಳಂ ಕಳುಹಿ, ರಾಜಕಾರ್ಯಕ್ಕೆ ಮದ-
ನನನಿರಿಸಿ, ತನ್ನ ಪರಿಜನ ಸಹಿತ ಪೊರಮಟ್ಟು
ದಿನವೆರಡಕ್ಕೈತಂದು, ಮುನ್ನಿರ್ದ ಕಾಡೆಲ್ಲಮೆಸವ ನಾಡಾಗಿರಲ್ಕೆ ||
ಮನದೊಳ್ಕರುಬನಾಂತು ಮೆಚ್ಚಿದವನಾಗಿ, ಲೇ
ಸಿನೊಳಾ ಕುಳಿಂದಕನಿದಿರ್ವಂದು ಸತ್ಕರಿಸೆ,
ಘನ ವಿಭವದಿಂದ ರಾಜಿಪ ಚಂದನಾವತಿಗೆ ಬಂದನಾ ದುಷ್ಟಬುದ್ಧಿ ||೩೨||

ರಿಪುಮಥನ ಕೇಳ್, ಕುಳಿಂದಂ ಬಹಳ ವೈಭವದೊ
ಳುಪಚರಿಸಿ, ತನ್ನ ನಂದನ ಚಂದ್ರಹಾಸನಂ
ವಿಪುಲ ಪರಿತೋಷದಿಂದೊಡೆಯಂಗೆ ಕಾಣಿಕೆಯನಿಡಿಸಿ, ಕಾಣಿಸಿದ ಬಳಿಕ, ||
ವಿಪಿನದೊಳ್ ತನಗೀ ಕುಮಾರಕಂ, ಮುಂಗೈದ
ತಪದ ಫಲದಿಂ, ತಾನೆ ದೊರೆಕೊಂಡನೀತನಂ
ಕೃಪೆಯಿಂದ ನೀವೆ ಪಾಲಿಸವೇಳ್ಪುದೆಂದು, ನಿಜ ಪತಿಗೆ ಕೈವರ್ತಿಸಿದನು ||೩೩||

ಗಾಡಿಸಿದ ನೃಪಲಕ್ಷಣದ ಚಂದ್ರಹಾಸನಂ
ನೋಡಿ, ವಿಸ್ಮಿತನಾಗಿ, ತನ್ನ ಮನದೊಳ್ ಪಿಂತೆ
ಮಾಡಿಸಿದ ಕೃತ್ಯಮಂ ನೆನದು, ವಂಚಿಸಿದರೇ ? ಚಂಡಾಲರೆಮ್ಮನೆಂದು ॥
ಕೂಡೆ ಮಮ್ಮಲ ಮರುಗಿ, ಪುಸಿಗೆ ನಸುನಗುತ ಕೊಂ
ಡಾಡಿ, ಮನ್ನಿಸಿ, ತನಗೆ, ನಿನ್ನ ಸುತನಂ ಕಂಡು
ಮೂಡಿತುತ್ಸವಮೆಂದನಾ ದುಷ್ಟಬುದ್ಧಿ ವಿನಯದೊಳಾ ಕುಳಿಂದನೊಡನೆ ॥೩೪॥

ವ್ಯಾಳದಂಗದ ನಯವೊ, ಗರ್ತ ಸಂಛಾದಿತ ತೃ
ಣಾಳಿಗಳೊ, ಮಕರದಿಕ್ಕೆಯ ಮಡುವಿನಂಬುಜವೊ,
ಬಾಳಧಾರೆಗೆ ಲೇಪಿಸಿದ ಮಧುವೊ,ಕಮಲಾಂಬಕಿಯರ ಕೃತಕದ ಬೇಟವೊ,॥
ಕಾಳಕೂಟಂ ಬೆರಸಿದಮೃತಾನ್ನ ಭೋಜನವೊ,
ಪೇಳಲರಿದೆನೆ ಸೊಗಸಿತಾ ದುಷ್ಟಬುದ್ಧಿ ಘಾ-
ತಾಳಿಕೆಯನೊಳವುದುಗಿ ಹರುಷ ಲಾಂಛನದಿಂದ ನಸುನಗುತ ನುಡಿದ ಮಾತು ॥೩೫॥

ಎತ್ತ ಬಲ್ಲರ್ ಸುಜನರೆಲೆ ಪಾರ್ಥ, ಕಪಟಿಗಳ
ಚಿತ್ತದೊಳ್ ಪುದುಗಿರ್ದ ಮಾ*ಟಮಂ, ಪೀಳಿಯವ
ನಿತ್ತು ಮನ್ನಿಸಿ ಮಂತ್ರಿಪತಿ ಚಂದ್ರಹಾಸನಂ ಕರೆದು ಕುಳ್ಳಿರಿಸಿಕೊಂಡು ॥
ಮತ್ತೆ ಮನದೊಳ್, ಮುನ್ನ ಭೂಸುರರ್ ತನಗೆಂದ
ವೃತ್ತಾಂತಮಂ ನೆನದು, ತನ್ನ ಸುತರಾಳ್ಕೆಗಾ-
ಯಿತ್ತು ಕಂಟಕಮಕಟ ! ಪಗೆಯಾದನಿವನೊರ್ವನೆಂದು ಚಿಂತಿಸುತಿರ್ದನು ॥೩೬॥

ಬಂಜೆಯಾಗದು ವಿಪ್ರರಂದೆನ್ನೊಳೆಂದ ನುಡಿ,
ರಂಜಿಸುವ ರಾಜಲಕ್ಷಣದೊಳೊಪ್ಪುವನಿವಂ,
ಭಂಜಿಸದಡೀ ಧರಣಿಗೀತನರನಾದಪಂ, ಬಳಿಕ ತನ್ನಾತ್ಮಜರ್ಗೆ ॥
ಸಂಜನಿಸಲರಿಯದು ನೃಪಾಲತ್ವಮಗ್ಗಳಿಕೆ
ಗಂಜುವವನಲ್ಲ, ಬಲವಂತನಹನೀತಂಗೆ
ನಂಜನೂಡಿಸಿ, ಕೊಲ್ಪುಪಾಯಮಂ ಮಾಳ್ಪೆನೆಂದೆಣಿಸಿದಂ ದುಷ್ಟಬುದ್ಧಿ ॥೩೭॥

* ಕುಹಕಮಂ

ರಾಕಾಶಶಾಂಕನಭ್ಯುದಯಮಂ ಕೆಡಿಸಿ, ತ-
ನ್ನಾಕಾರಮಂ ತೋರಿಸುವೆನೆಂಬ ಕತ್ತಲೆಯೊ
ಲಾ ಕಮಲಲೋಚನನಭೃತ್ಯನಂ ಕೊಲಿಸಿ,ತಾಂ ಬಾಳ್ವೆನೆಂಬುಜ್ಜುಗದೊಳು||
ಆ ಕುಮತಿಯಹ ಮಂತ್ರಿ ಬಳಿಕೊಂದು ಲೇಖನವ
ನೇಕಾಂತದೊಳ್ ಬರಸಿ, ಮೇಣದಕೆ ಮುದ್ರೆಯಿಂ
ಜೋಕೆಯಿಂದಳವಡಿಸಿ, ಶಶಿಹಾಸನಂ ನೋಡಿ ನಗುತ್ತಿಂತೆಂದನು ||೩೮||

ಉರ್ವಮಂತ್ರದ ಕಜ್ಜಮಿದು ಚಂದ್ರಹಾಸ, ನೀ
ನೊರ್ವನೆ ಹಯಾರೂಢನಾಗಿ ನಾಲ್ವರೆ† ಸೇವ
ಕರ್ವೆರಸಿ, ರಾಜಧಾನಿಗೆ ಪೋಗಿ, ತನ್ನ ಮಗ ಮದನಂಗೆ ಮುದ್ರೆಸಹಿತ ||
ಸರ್ವಜನಮರಿಯದಂತೀವುದೀ ಪತ್ರಿಕೆಯ
ನುರ್ವರೆಯೊಳಾವೆಸಗಿದತಿಶಯದ ಮಾಳ್ಕೆ, ನ
ಮ್ಮಿರ್ವರೊಳ್ಗುಪ್ತಮಾಗಿರಲೆಂದು ಕೊಟ್ಟನಾ ಮಂತ್ರಿ ತಲ್ಲೇಖನವನು ||೩೯||

ಪ್ರೀತಿಯಿಂ ಪೇಳ್ದನಂತಸ್ಥಮಂ, ತನ್ನೊಳೀ
ಮಾತು ನಿಶ್ಚಯಮೆಂದು ನಂಬಿ, ಕೈಕೊಂಡು ಹರು
ಷಾತಿಶಯದಿಂದ ಮಂತ್ರಿಗೆ ಮಣಿದು,ಬೀಳ್ಕೊಂಡು ವಂದಿಸಿ ಕುಳಿಂದನಡಿಗೆ||
ಆತನೊಳ್ಪರಕೆವೆತ್ತೊಡನೆ ಕಳುಹಿಸಿಕೊಂಡು
ಮಾತೆ ಮೇಧಾವಿನಿಗೆ ಬಂದು, ನಿರ್ಗಮವನಾ*
ಖ್ಯಾತಿಸಿ, ಪದಾಂಬುಜಕೆ ಪಣೆಯಿಟ್ಟನಾ ಚಂದ್ರಹಾಸನಭ್ಯಗ್ರದಿಂದ ||೪೦||

ಆ ಸುದತಿ ಪಣೆವಿಡಿದು ನೆಗಪಿ, ಸುಕುಮಾರಂಗೆ
ಸೇಸೆದಳಿದಾರತಿಯನೆತ್ತಿ, ತಿಲಕಮನಿಟ್ಟು,
ಭಾಸುರ ಸುಲಾಜೆ-ದಧಿ-ದುರ್ವಾಕ್ಷತೆಗಳೊಡನೆ ತಳಿಗೆದಂಬುಲವನಿತ್ತು ||
ಲೇಸೊದವಲಧ್ವದೊಳ್, ನಿನ್ನವಯವಂಗಳಂ
ವಾಸುದೇವಂ ಕಾಯಲನುಕೂಲೆಯಾಗಿಹ ವ
ಧೂ ಸಮನ್ವಿತನಾಗಿ, ರಾಜ್ಯಮಂ ಪಡೆಯೆಂದು ಪರಸಿ ಬೀಳ್ಕೊಟ್ಟಳಂದು ||೪೧||

† ನಾಲ್ವರ್ಸೇವಕ. * ನಿರ್ಗಮನಂ ಖ್ಯಾತಿಸಿ

ಕ್ರಮದಿಂದ ಮಾತೆಯಂ ಬೀಳ್ಕೊಂಡು, ಪೊರಮಡುವ
ಸಮಯದೊಳ್, ಚಂದ್ರಹಾಸಂ ಕಂಡನಿದಿರೆ ಕುಂ
ಕುಮ ಸುರಂಜಿತ ಹರಿದ್ರಾಂಗದಿಂ ಕಂಗೊಳಿಪ ನೂತನ ವಧೂವರರನು ॥
*ಸುಮನಸಾಕಾರದಿಂ ಬರುತಿರ್ದ ಭೂಸುರೋ
ತ್ತಮ ಯುಗವನೆಳೆಗರುವೆರಸಿ ಬಪ್ಪ ಗೃಷ್ಟಿಯಂ
ರಮಣೀಯ ಕುಸುಮಫಲಮಂ ಕೊಂಡು ತನಗೀಯಲ್ಕೈತಹ ವನಾಧಿಪರನು
॥ ೪೨ ॥

ಸೂಡಿದಂ ಪರಿಪರಿಯೊಳೆಸೆವ ಕುಸುಮಂಗಳಿಂ,
ಮಾಡಿದ ಸುಮೌಳಿಯಂ ತಲೆಗೊರ್ವನೊರ್ವನೆಡೆ
ಗೂಡಿ ಸೇರಿಸಿ ಕಟ್ಟಿದಚ್ಚ ಸಂಪಗೆಯ ಮಾಲೆಯನಿಕ್ಕಿದಂ ಕೊರಳ್ಗೆ ॥
ನೀಡಿದಂ ಮತ್ತೊರ್ವನೊಪ್ಪುವ ಕರಾಂಬುಜಕೆ
ದಾಡಿಮದ ಫಲವನೆಲ್ಲಮಂ ಕೈಕೊಂಡು,
ಗಾಡಿ ಮಿಗೆ, ಮೆರೆವ ನವ ವರನಂತೆ ಪೊರಮಟ್ಟನಾ ಚಂದ್ರಹಾಸನಂದು
॥ ೪೩ ॥

ಹಯ ವರ ಸಮಾರೂಢನಾಗಿ, ಸೇವಕ ಚತು
ಷ್ಟಯದೊಡನೆ ಸೂಚಿತ ಶುಭೋದಯದ ಶಕುನಾವ
ಳಿಯನಾಲಿಸುತ, ಬಟ್ಟೆವಿಡಿದು, ಕುಂತಳಪುರದ ಬಾಹ್ಯೋಪವನಕೆ ಬರಲು ॥
ನಯ ಸರದ ಕೋಗಿಲೆಯ ನಾದರದ ನುಡಿಯೊಳತಿ
ಶಯ ಫಲೋತ್ಕರದ ತರು ಶಾಖೆಗಳ ಕೈಗಾಣಿ–
ಕೆಯೊಳಿದಿರ್ಗೊಂಡುಪಚರಿಸುವಂತೆ ಚಂದ್ರಹಾಸನ ಮುಂದೆ ವನ
ಮೆಸೆದುದು ॥೪೪॥

ತ‡ಳಿತದಳದೆಳೆ ಮಾವುಗಳ ನೆಳಲ್ಗವಿದ ನಿ
ರ್ಮಲ ಪುಳಿನ ತಳದಿಂ, ತೊಡರ್ದಡರ್ದಲರ್ವಳ್ಳಿ
ಗಳ ಮಂಟಪಂಗಳಿಂ, ವಿವಿಧ ಮಣಿಮಯ ಕೃತಕಗಿರಿ ಕಂದರಂಗಳಿಂದ ॥
ತೊಳಪ ರನ್ನದ ಪಾಸರೆಗಳಿಂದ ರಂಜಿಸುವ,
ನಳಿನೋತ್ಪಲ ಪ್ರಕರ ಶೋಭಿತ ಸರೋವರಂ
ಗಳ ರಮ್ಯ ಸೋಪಾನದಿಂದ ತದ್ರಾಜ ಕೇಳೀವನಂ ಕಣ್ಗೆಸೆದುದು ॥ ೪೫ ॥

* ಸಮ ಸದಾಕಾರದಿಂ ‡ ತಳಿರ್ದುರುಗಿದೆಳೆ

*ನರಸ ಮಿಗೆ ನಲಿದಾಡುವಂಚೆಗಳ ಕೊಂಚೆಗಳ,
ಬೆರಸಿ ರಮಿಸುವ ಕುಣಿವ ಕೋಕಿಗಳ ಕೇಕಿಗಳ,
ನೆರನೆರದು ಮೊರೆವ ಮರಿದುಂಬಿಗಳ ಡೊಂಬಿಗಳ,ಚೀರ್ವ ಗಿಳಿ ಕೋಗಿಲೆಗಳ॥
ತರುಲತೆಯು ತುರುಗಲ ರಸಾಲ ಪ್ರವಾಳ ಪ್ರ
ಕರದಶೋಕಗಳ ಕುಸುಮಾಳಿಗಳ ಗಾಳಿಗಳ,
ಪರಿಮಳದ ಮನಕಿಂಪಸೊಗೆಯಿಸುವ ಸೊಗಯಿಸುವ ರಾಜೋವವನ
ಮೆಸೆದುದು || ೪೬ ||

ಹೃದ್ಯಮಾಗಿಹ ಶೈತ್ಯ ಸೌರಭ್ಯಮಾಂದ್ಯದಿಂ,
ಮಧ್ಯಾಹ್ನ ಮಾರುತಂ ಬೀಸಿ ಮಾರ್ಗಶ್ರಮಂ
ಸದ್ಯಃ ಪ್ರಶಮನಮಾಗಲ್ಕಿ, ಹರುಷದೊಳಲ್ಲಿ ಕೃಷ್ಣನಂ ಪೂಜೆಗೈವ ॥
ಉದ್ಯೋಗದಿಂದಿಳಿದು, ತಣ್ಣೆಳಲ ತರು ಮೂಲ
ಕುದ್ಯತ್ತುರಂಗಮಂ ನೀರ್ಗುಡಿಸಿ ಕಟ್ಟಿ, ನಿರ
ವದ್ಯ ಗುಣನಿಧಿ ಚಂದ್ರಹಾಸನೆಳೆವುಲ್ಗಳಂ ತಿರಿತರಿಸಿ ಮುಂದಿಟ್ಟನು ॥೪೭॥

ತೇಜಿಯಂ ಕಟ್ಟಿದೆಡೆಯೊಳ್ ಸೇವಕರನಿರಿಸಿ,
ರಾಜವನದೊಳ್ ಪೊಕ್ಕು, ಶಶಿಹಾಸನಲ್ಲಿ ವಿ
ಭ್ರಾಜಿಸುವ ನಿರ್ಮಲ ಸರಸ್ತೀರದೊಳ್ ಮಿಂದು,ಶುಚಿಯಾಗಿ ಸುಸ್ಥಳದೊಳು॥
ರಾಜೀವ ಮೊದಲಾದಲರ್ಗಳಿಂ ತಿರಿದು, ಹರಿ
ಪೂಜೆಯಂ ಮಾಡಿ, ತಾಂ ತಂದ ಪಾಥೇಯಮಂ
ಭೋಜನಂಗೈದು, ವಿಶ್ರಮನಾಗಿ ತಳಿತ ಮಾಮರದ ನೆಳಲಂ ನಾರ್ದನು||೪೮||

ತಿರಿದೆಳದಳಿರ್ಗಳಂ ಹಾಸಿ, ಕುಳ್ಳಿರ್ದೊಯ್ಯ
ನೊರಗಲ್ಕೆ, ನಡುವಗಲ ಬಿಸಿಲಿಂದ ಮಾರ್ಗದೊಳ್
ನೆರೆ ಬಳಲ್ದಿಹ ಚಂದ್ರಹಾಸಂಗೆ, ತಣ್ಣೆಲರ ಸೊಗಸಿಂದ ಕಣ್ಣೆವೆಗಳು ||
ಸೆರೆಗೊಂಡುವಾಲಿಗಳನಾತ್ಮೀಯ ಕೃತ್ಯಮಂ
ಮರೆದು, ನಿದ್ರಾಲೋಲನಾಗಿ ಮಲಗಿದನವಂ,
ಮಿರುಗುವಹಿತಲ್ಪದೊಳ್ ದೇವಪುರನಿಲಯ ಲಕ್ಷ್ಮೀವರಂ ಪವಡಿಸು
ವೊಲು ||೪೯||



---

* ಸರಸಿಯೋಳ್ ನಲಿದಾಡುವ

## ೩೦ನೆಯ ಸಂಧಿ

**ನಿದ್ದೆಗೈದಿಂದುಹಾಸನ ಕಂಚುಕದ ಕೊನೆಯೊ**
**ಳಿದ್ದ ಪತ್ರವನೋದಿಕೊಂಡು, ಚದುರಿಂದದಂ**
**ತಿದ್ದಿ, ತನಗಾತನಂ ಕಾಂತನಹ ದಾಯುವಂ**
**ಮಾಡಿದಳ್ಮಂತ್ರಿ ತನುಜೆ ॥**

ಕುಂತೀಕುಮಾರ ಕೇಳ್, ಚಂದ್ರಹಾಸಂ ಬನದೊ
ಳಿಂತು ಸುಖನಿದ್ರೆಯಿಂದಿರುತಿರ್ಪ ಸಮಯದೊಳ್
ಕುಂತಳೇಂದ್ರಂಗೆ ಚಂಪಕಮಾಲಿನೀ ನಾಮದೊರ್ವ ಮಗಳುಂಟವಳ್ಗೆ ॥
ಸಂತತಂ ಮಂತ್ರಿಸುತೆ ವಿಷಯೆ ಸಖಿಯಾಗಿರ್ಪ
ಳಂತರಿಸದವರಿರ್ವರುಂ ಬಂದರಲ್ಲಿಗೆ, ವ
ಸಂತ ಕಾಲಂ ಪ್ರಾಪ್ತಮಾಗಿರೆ ಜಲಕ್ರೀಡೆಗಾಳಿಯರ ಗಡಣದಿಂದ ॥ ೧ ॥

ಒಚ್ಚೇರಿಗಣ್ಣ ಕೋಮಲೆಯರೊಪ್ಪಿಡಿ ನಡುವಿ
ನಚ್ಚಿಗದ ಬಾಲಕಿಯರೋರಣದ ಪೊಳೆವಲ್ಲ,
ನಿಚ್ಚಳದ ಕದಪಿನ, ನಿತಂಬಿನಿಯರೊಮ್ಮಾರು ವೇಣಿಯ ವಿಲಾಸಿನಿಯರು ॥
ಒಚ್ಚತದ ಚೆಲ್ವಿನೆಳವೆಣ್ಗಳೊಳ್ಕೈಕೊಳ್ಳ
ದಚ್ಚರಿಯ ಕಡು ಕಕ್ಕಸದ ಬಟ್ಟ ಬಲ್ಮೊಲೆಯ,
ಪೊಚ್ಚ ಪೊಸ ಜೌವನದ ನೀರೆಯರ್ ನಡೆತಂದರೊಗ್ಗಾಗಿ ಸಂಭ್ರಮದೊಳು
॥೨॥

ಕಳಕೀರವಾಣಿಯರ್, ಕಾಳಾಹಿ ವೇಣಿಯರ್,
ಕಳಭ ಮದಯಾನೆಯರ್, ಕಾಯಜ ನಿಧಾನೆಯರ್,
ಕಳಧೌತ ಗಾತ್ರೆಯರ್, ಕಂಜದಳನೇತ್ರೆಯರ್, ಕಳೆವೆತ್ತ ಕಾಮಿನಿಯರು ||
ಕಲಶ ಕುಚಯುಗಳೆಯರ್, ಕನಕಮಣಿ ನಿಗಳೆಯರ್,
ಕಳಿಕಳಿಪ ವದನೆಯರ್, ಕುಲಿಶಾಭ ರದನೆಯರ್,
ಕಳೆದುಳಿದ ರನ್ನೆಯರ್, ಕಾಂತಿಸಂಪನ್ನೆಯರ್,ನಂದನಕೆ ನಡೆತಂದರು||೩||

ತಳಿರಡಿಗೆ, ತೊಂಡೆವಣ್ತುಟಿಗೆ, ತಾವರೆ ಮೊಗಕೆ,
ಬೆಳಗಾಯಿ ಮೊಲೆಗೆ, ನೈದಿಲೆ ಕಣ್ಗೆ, ಬಾಳೆ ತೊಡೆ-
ಗೆಳವಳ್ಳಿ ಮೈಗೆ, ಸಂಪಗೆ ನಾಸಿಕಕ್ಕೆ, ಮಲ್ಲಿಗೆ ನಗೆಗೆ, ಮೊಲ್ಲೆ ಪಲ್ಗೆ ||
ಅಳಿ ಕುಂತಳಕೆ, ನವಿಲ್ ಮುಡಿಗಂಚೆ ನಡೆಗೆ, ಕೋ
ಗಿಲೆ ಗಿಳಿಗಳಿಂಚರಕೆ, ಸೋಲ್ದವಯವಂಗಳೊಳ್
ನೆಲಸಿದವು, ಪೆಣ್ಗಳ್ಗೆ ಸೋಲದವರಾರೆನಲ್ ನಡೆತಂದರಂಗನೆಯರು || ೪ ||

ಮಿಂಡೆದ್ದ ಹೆಣ್ಗಳುಪವನಕೆ ನಡೆತಂದು, ಮುಂ
ಕೊಂಡು ಬಹು ವಿಧದ ಚೇಷ್ಟೆಗಳಿಂದ ಭುಲ್ಲವಿಸಿ
ಕಂಡಕಂಡವನಿಜಾತಂಗಳಂ ಚಿಗುರಿಸಿದರೊಡನೆ ಪೂದೋರಿಸಿದರು ||
ತಂಡತಂಡದೊಳಲ್ಲಿ ಪರಿವರಿಯಲುರ್ಗೊಯ್ದು
ಬೆಂಡಾಗಿ ಬಂದು, ನಿರ್ಮಲ ಸರೋವರವನು
ದ್ದಂಡದೊಳ್ಪೊಕ್ಕರಂಬುಕ್ರೀಡೆಗಂಗಜನ ಸೊಕ್ಕಾನೆಗಳ ತೆರದೊಳು || ೫ ||

ನಿರಿಗುರುಳ್ಗಳ ತುಂಬಿಗಳ ಪೊಳೆವ ಲೋಚನದ
ಮರಿ ಮೀನ ಮೊಗದಲರ್ದಾವರೆಯ ತ್ರಿವಳಿಗಳ
ಕಿರುದೆರೆಯ ಕಂಧರದ ಕಂಬುವಿನ ಘನ ಕುಚಂಗಳ ಕಂಜ ಮುಕುಳಂಗಳ ||
ಪೊರವಾರ ಪುಳಿನದ ತನುಚ್ಛವಿಯ ತಿಳಿ ನೀರ
ಮೆರೆವ ಮಧ್ಯದ ಮೃಣಾಳದ ಬಗೆಯ ಭೇದಮಂ
ಕುರುಪಿಡುವಡರಿದೆನಲ್ಸರಸಿಯೊಳ್ತರಳೆಯರ ಜಲಕೇಳಿ ರಾಜಿಸಿದುದು || ೬ ||

ಲಲನೆಯರ್ ತಾವರೆದೆರೆದ ಮೇಲುದಿನೊಳೆಸೆವ
ನೆಲೆ ಮೊಲೆಗಳಲುಗೆ ತಾವರೆದೆರದ ಕೈಗಳಿಂ
ತುಳುಕಿದರ್ಚೆಲ್ವ ಕಂಕಣರವಂ ಮಿಗೆ ಚೆಲ್ವ ಕಂಕಣರವಂಗಳೊಡನೆ ॥
ವಿಲಸಿತದ ಕಾಸಾರದಂಬುಗಳನೆಸೆವ ಜೇರ್
ಕೊಳವಿಗಳ ಕದನಕಾಸಾರದಂಬುಗಳವೋ
ಲಳವಡಿಸಿ ಸರಸಕೇಳಿಗೆ ಪೊಕ್ಕರಡಿಗಡಿಗೆ ಸರಸಕೇಳಿಗೆಯಾಗಲು ॥೭॥

ಹೊಳೆವ ಹುಬ್ಬುಗಳ, ಭಾಸುರ ಚಾಪ ಲತೆಯು, ಮುಂ
ಡಳಿಸಿದುನ್ನತ ಪಯೋಧರದ, ಕಡೆಗಣ್ಣ ಚಂ
ಚಲದ ಭೂಷಣದ ಘನರವದ ಚಿತ್ರಾಂಗಿಯರ್ತವೆ ಹಸ್ತದೊಳ್ತೋಯುದ ॥
ಮಳೆಗರೆವುದಚ್ಚರಿಯೆ ? ವೇಳೆಸೆ ಸುವಾರಿಯುಂ
ತುಳುಕಿದರ್, ಬಿನದದಿಂದೊರ್ವರೊರ್ವರ ಮೇಲೆ
ಮೊಲೆಗೆಲದ ಕುಂಕುಮದ ಕದಡರುಣಗಿರಿತಟದಕೆಂಬೊನಲ್ಗಳವೊಲಾಗಿ
॥೮॥

ಹರಿಯಲೋಚನಮುಜಂ ಕುಳ್ಳಿರ್ಪ ತಾಣಮಿಂ
ದಿರೆಯ ನಿಳಯುಂ, ದಿವಾಕರನ ಕೆಳೆ, ಮನ್ಮಥನ
ಸರಳಾರಡಿಗಳಿಕ್ಕೆ ವರಿಮಳದ ಬೀಡೆನಿಸಿಕೊಂಡು, ಸಂಪೂರ್ಣತೆಯೊಳು ॥
ಪರಿಶೋಭಿಸಿದೆವಿಲ್ಲಿ, ನೆರೆದಿಂಗಳಂ ಪೋಲ್ವ
ತರುಣಿಯರ ಚೆಲ್ವ ನಗೆಮೊಗದ ಮುಂದೀಗ, ತಾ-
ವರೆಯಾದೆವೆಂಬಂತೆ ಪೆಣ್ಗಳಾಸ್ಯಕೆ ಸೋಲ್ದವಾಕೊಳವ ಕಮಲಂಗಳು ॥೯॥

ಮೇಲಕುಪ್ಪರಿಸಿ ತಲೆ ಕೆಳಗಾಗಿ ಬಿದ್ದೊಡಂ,
ಲೋಲ ಲೋಚನಕೆ ವಾಸಟಿಯಾಗದಿರೆ, ಮೊನ್ಗ
ಳಾಳದೊಳ್ಮುಳುಗಿದವು ಗತಿಗಳ ವಿಲಾಸಮಂ ಕಂಡು ಕಲಹಂಸಂಗಳು ॥
ಕಾಲಿಂದ ನಡೆಯಲೊಲ್ಲದೆ ನಭಕೆ ವಾರಿದವು,
ಬಾಲೆಯರ ಕಣ್ಣ ಹೊಳಹಿಗೆ ಗಮನದುಜ್ಜುಗಕೆ
ಸೋಲದವರಾರೆಂಬ ತೆರನಾಗೆ ಸಲಿಲದೊಳ್ ಕ್ರೀಡಿಸಿದರಂಗನೆಯರು॥೧೦॥

ಶಿಖರಿ ದಶನದ್ಯುತಿಯ ಬೆಳ್ನಗೆಯ ಸೂಸಲೆನೆ,
ನಖರುಚಿಯ ತೆರಳಿಕೆಯ ಹೊರಳಿಯೆನೆ, ಲೋಚನ ವಿ
ಶಿಖದ ಮುನ್ಮೊನೆಯೊಗರ ಧಾಳಿಯೆನೆ, ಹಾರಮುಂ ಪರಿದು ಬೀರ್ದರೊ
ಪೇಳೆನೆ ॥

ಸಖಿಯರಂ ಕೂಡಿಕೊಂಡೊರ್ವರೊರ್ವರ್ಗೆ ಸ-
ಮ್ಮುಖವಾಗಿ, ವಿಷಯೆ ಚಂಪಕಮಾಲಿನಿಯರಾಗ
ಸುಖಜಲಕ್ರೀಡೆಯೊಳ್ಚೆಲ್ವ ತಿಳಿ ನೀರ ತುಂತುರ್ವನಿಗಳೆಸದಿರ್ದವು ॥೧೧॥

ಮುದದಿಂದೆ ವಿಷಯೆ ಚಂಪಕಮಾಲಿನಿಯರೊಡನೆ
ಸುದತಿಯರ್, ನಾನಾಪ್ರಕಾರದಿಂ ಕ್ರೀಡಿಸಿದರ್
ಉದಕದೊಳ್, ಬಳಿಕ ತಮ್ಮಾನನಸುಧಾಂಶುಮಂಡಲದ ಬೆಳ್ದಿಂಗಳಿಂದ ||
ಸದಮಳ ಸರೋವರದ ತೀರದೊಳ್ಬಳಸಿ ಕ
ಟ್ಟಿದ ಚಂದ್ರಕಾಂತ ಸೋಪಾನದೊಳೊಸರ್ವ ನೀ
ರೊದವಿತೆನೆ ಮೈಗಳ್ಗೆ ತಣ್ಣಸಂ ತೋರಲಾ ಕೊಳದಿಂದ ಪೊರಮಟ್ಟರು
॥೧೨॥

ಕೂಲವನಡರ್ದು ನನೆದಂಗದೊಳ್ಪತ್ತಿದ ದು-
ಕೂಲದೊಳಿರಲ್ಕೆ ತಾಪಸರ ದೃಢಮತಿಗೆ ಪ್ರತಿ
ಕೂಲ ಕೃತಿಗಳೊ, ಮೋಹನ ಸರಸದೊಳಾಪ್ರ್ರತೆಯನಾಂತ ಚೆಲ್ವಿನ
ಕಣಿಗಳೊ, ||

ಸಾಲ ಮಣಿಮಯದ ಸೋಪಾನದೊಳ್ನಿಲಿಸಿರ್ದ
ಸಾಲಭಂಜಿಕೆಗಳೊ, ವಿಚಿತ್ರಮೆನೆ ರಂಜಿಪ ರ-
ಸಾಲಪಲ್ಲವಪಾಣಿ ಪಾದತಳದಬಲೆಯರ ರೂಪುಗಳ್ಕಣ್ಗೆಸದವು ||೧೩||

ಅದಟಿಂದ ಮನ್ಮಥಂ ತ್ರಿಗಜಮುಂ ಗೆಲ್ವೆಡೆಯೊಳ್
ಒದವಿದ ಪಲವು ಕೈದುಗಳನಲ್ಲಿ ಜಾಡಿಸಿ, ತೊ
ಳೆದು ತೀರದೊಳ್ನಿಲಿಸಿ, ಮೇಲಣಿಂದೊರೆಗಳಂ ತೊಡಸಿದನೊ ಪೇಳೆನಲ್ಕೆ ||
ಉದಕದಿಂ ಪೊರಮಟ್ಟು, ನಿಂದ ನೀರೆಯರ ಕಾ-
ಯದ ಬಳಿಯ ನನೆದು ನಿಡಿದಾಗಿ ಮಡಪರಿಯಂತಿ
ಳಿದು ಜೋಲ್ವ ಕೇಶಪಾಶಂಗಳಾರಾಜಿಸಿದುವೇನೆಂಬೆನಚ್ಚರಿಯನು ||೧೪||

ತೊಳಗುವ ನಿತಂಬಗಿರಿಯಿಂದಾಗಸಕೆ ಪರ್ಬಿ
ದೆಳೆಯ ಬಳ್ಳಿಯ ಮೇಲೆ ನೆಲಸಿದೆಣೆವಕ್ಕಿಗಳ್
ಬಳಿವಿಡಿಮ ಮದನ ಶಬರನ ಬಲೆಗೆ ಸಿಕ್ಕಿ, ನಭಕುಬ್ಬಿಕೊಂಡೇಳುವಂತೆ ॥
ಸಲಿಲದೊಳ್ನೆನೆದ ದೇವಾಂಗದೊಳಡರ್ದ ನೆರೆ
ಮೊಲೆಗಳಾರಾಜಿಸೆ, ಮೃಗಾಕ್ಷಿಯರ ಚೆಲ್ವು ನಿ
ಚ್ಚಳದಿಂದ ಕಾಣಿಸಿತು, ಕಾಸಾರ ತೀರದೊಳ್ತೀರದೊಳ್ಪಿಂದ ಮೆರೆದು ||೧೫||

ಹಿಮದಿಂದ ತಣ್ಣನಂ ಬಡೆದಿರ್ದ ವಾಗಿಯುಂ
ಕ್ರಮದಿಂದ ಜಾರಿಸಿ, ವಸಂತ ಋತು ತಲೆದೋರ್ವ
ಸಮಯದವೋಲೇಣಾಕ್ಷಿಯರ್ನನೆದ ಮೈಯೊಳಿಹ ವಸನಂಗಳಂ ಸಡಿಲ್ಚಿ ॥
ರಮಣೀಯ ಚಿತ್ರಾವಲಂಬನದ ಶೋಭೆಗಳ,
ಸಮನಿಸಿದ ಚಂದ್ರಿಕೆಯ ಸೊಗಸುವೆಳೆವಾದಲದ,
ಸುಮನೋನುರಾಗದಿಂ ಪಲವು ಬಣ್ಣಂಗಳಂ ತೆಗೆದುಟ್ಟು ರಂಜಿಸಿದರು ॥೧೬॥

ತಡಿಗಡರ್ದೊಡನೆ ಮಡಿ ವಸ್ತ್ರಮಂ ತೆಗೆದುಟ್ಟು,
ಸಿಡುಗುರುಳ್ಗೆನವ ಧೂಪದ ಪೊಗೆಗಳಂ ಕೊಟ್ಟು,
ತೊಡವೆಲ್ಲವಂ ತೊಟ್ಟು, ಪಣೆಗೆ ತಿಲಕವನಿಟ್ಟು, ತಿಗುರಿಂದ ಸೊಬಗುವಟ್ಟು॥
ಅಡಿಗಲತಿಗೆಯನಕ್ಷಿಗಂಜನವನಲರ್ಗಳಂ
ಮುಡಿಗೆ, ಸುಣ್ಗದಪಿಂಗೆ ಮಕರಪತ್ರಮನಾಂತು,
ಬಿಡದೆ ಮಧುಪಾನಮಂ ಮಾಡಿ, ಕಪ್ಪುರ ವೀಳಯಂಗೊಂಡು ಸೊಗಯಿ
ಸಿದರು || ೧೭ ||

ಬಳಿಕೊರ್ವರೊರ್ವರಂ ನೋಡುತ್ತ ಕೂಡುತ್ತ,
ನಲವಿಂದ ನೃತ್ಯಮಂ ಮಾಡುತ್ತ ಪಾಡುತ್ತ
ನೆಣಸಿ ಸರಸೋಕ್ತಿಗಳನಾಡುತ್ತ ತೀಡುತ್ತ, ಬೆಳ್ನಗೆಯ ಬೆಡಗುಗಳನು ॥
ಅಲರ್ಗಳಂ ತೆಗತೆಗದು ನೀಡುತ್ತ ಸೂಡುತ್ತ,
ಲಲಿತ ಮಧು ಚಷಕವಂ ಬೇಡುತ್ತ ಕಾಡುತ್ತ,
ಕಲೆಗಳ ವಿಲಾಸಮಂ ಪೂಡುತ್ತಲೋಡುತ್ತ ಕಣ್ಗೆಸೆದರೆಳವೆಣ್ಗಳು ||೧೮||

ಆಳಿಯರೋಳಿಂತು ಚಂಪಕಮಾಲಿನಿಗೆ ನರಸ
ಕೇಳಿ ವೆಗ್ಗಳಿಸಿರ್ದ ಸಮಯದೊಳ್, ಅಲರ್ಗೊಯ್ವ
ಬೇಳಂಬದಿಂದ ಕೆಲಸಿಡಿದು ಬಂದಾ ವಿಷಯೆ ಚೂತದ್ರುಮದ ನೆಳಲೊಳು ॥
ತೋಳ ತಲೆಗಿಂಬಿನ ತಳಿರ್ವಸೆಯ ಮೇಲೆ, ತಂ
ಗಾಳಿಗೊಡ್ಡಿದ ಮೈಯ ಸೊಗಸಿಂದ ಮರೆದು, ನಿ
ದ್ರಾಲೋಲನಾಗಿ ಮಲಗಿಹ ಚಂದ್ರಹಾಸನಂ ಕಂಡು ನೈವೆರಗಾದಳು ॥೧೯॥
ಲೋಕತ್ರಯಂ ತನಗೆ ವಶವರ್ತಿಯಾದುದಿ
ನ್ನೇಕೆ ಧಾವತಿಯೆಂದು, ಸುಖದಿಂದ ಪವಡಿಸಿದ
ನೋ ಕಬ್ಬುವಿಲ್ಲನೆನೆ, ಬೇಸರದೆ ಬಾಂದಳದೊಳಾವಗಂ ನಡೆವ ಭವಣಿ ||
ಸಾಕೆಂದು ನಿದ್ರೆಗೈದನೊ ಸೋಮನೆನೆ, ವನ
ಶ್ರೀ ಕಾಮಿನೀ ರತಿಶ್ರಮದೊಳೊರಗಿದನೊ ಕುಸು
ಮಾಕರನೆನಲ್ಕೆ ಮಲಗಿಹ ಚಂದ್ರಹಾಸನಂ ಕಂಡು ವಿಸ್ಮಿತೆಯಾದಳು॥ ೨೦ ॥
ಒರ್ವರೊರ್ವರನಗಲರಶ್ವಿನೀ ದೇವತೆಗಳ್ |
ಉರ್ವ ನಳ–ಕೂಬರ–ಜಯಂತಾದಿ ಸುರತನುಜ |
ರುರ್ವರೆಗದೇಕೆ ಬಹರಿನ ಶಶಿಗಳಾದಡಿಹವುಷ್ಣ ಶೀತದ್ಯುತಿಗಳು ||
ಗೀರ್ವಾಣ ಯಕ್ಷ ಕಿನ್ನರ ಸಿದ್ಧ ಗರುಡ ಗಂ |
ಧರ್ವರೊಳಗಾ*ವನೋ, ಮನುಜನಲ್ಲೆಂದವನ
ಸರ್ವಾಂಗಮಂ ಬಿಡದೆ ನೋಡಿದಳ್ವಿಷಯೆ ವಿಷಯಾಸಕ್ತಯಾಗಿ ಬಳಿಕ
॥೨೧॥
ಬೆಚ್ಚಿರಳೆಗಂಗಳವನವಯವದ ಚೆಲ್ವಿನೊ
ಳೆಚ್ಚಿಚ್ಚನಂಗಜನಾಗ ಕಿವಿವರೆಗೆ ತೆಗೆದು ತುಂ
ಬೆಚ್ಚಲರ್ಗೋಲಂತರಂಗದೊಳ್ನಾಂಟಿದವು., ದಾಂಟಿದವು ಗರಿಗಳೊಡನೆ ॥
ಬೆಚ್ಚನಾನೆದೆಯಿಂದ ಕಾತರಿಸಿ ಮುದುಡುಗೊಂ
ಡೆಚ್ಚರಿಂದೇಳ್ವ ರೋಮಾಂಚನದೊಳಾನೆ ಮುಂ
ಬೆಚ್ಚು, ಬೆಮರುವ ಬಾಲೆ ಬೇಸರದೆ ನಿಂದು, ನಿಟ್ಟುಸುತಿರ್ದಳೇವೇಳ್ವೆನು
॥೨೨॥

* ಗಾವವನೊ.

ಸುತ್ತ ನೋಡುವಳೊಮ್ಮೆ ನೂಪುರವಲಗದಂತೆ
ಹತ್ತೆ ನಾರುವಳೊಮ್ಮೆ ನೋಂಕಲೆಂತಹುದೆಂದು
ಮತ್ತೆ ಮುರಿದವಳೊಮ್ಮೆ, ಹೆಜ್ಜೆಹೆಜ್ಜೆಯ ಮೇಲೆ ಸಲ್ವಳಮ್ಮದೆ ನಿಲ್ವಳು ॥
ಚಿತ್ತದೊಳ್ನಿಶ್ಚೈಸಿ ನೆರೆಯ*ತಿಳಿಸುವಳೊಮ್ಮೆ
ಹೊತ್ತಲ್ಲದನುಚಿತಕೆ ಬೆದರಿ ಹಿಂಗುವಳೊಮ್ಮೆ
ತತ್ತಳದ ಬೇ‡ಟದೊಳ್ಬೆಂಡಾಗಿ, ವಿಷಯೆ ನಿಂದಿರ್ದಳಾತನ ಪೊರೆಯೊಳು
॥೨೨॥

ದಿವಿಜೇಂದ್ರತನಯ ಕೇಳೀ ತೆರವೊಳಾಗ ನವ
ಯುವತಿ ನಿಂದೀಕ್ಷಿಸುತ ಕಂಡಳವನಂಗದೊಳೆ
ನವ ರುಚಿರ ಕಂಚುಕದ ತುದಿನೆರಗಿನೊಳ್ಕಟ್ಟಿಕೊಂಡಿರ್ದ ಪತ್ರಿಕೆಯನು ॥
ತವಕಮುಂಬಟ್ಟು, ಮುದ್ರೆಯನೋಸರಿಸಿ ತೆಗದು,
ವಿವರದೊಳ್ತನ್ನ ತಂದೆಯ ಹೆಸರ ಬರಹಮಿರೆ
ಲವಲವಿಕೆ ಮಿಗೆ, ನೋಡಿ, ಹರುಷಪುಳಕದೊಳಾಗ ನಿಂದೋದಿಕೊಳು
ತಿರ್ದಳು ॥ ೨೪ ॥

ಶ್ರೀಮತ್ಸಚಿವ ಶಿರೋಮಣಿ ದುಷ್ಟಬುದ್ಧಿ ಸ
ಪ್ರೇಮದಿಂ ತನ್ನ ಮಗ ಮದನಂಗೆ ಮಿಗೆ ಪರಸಿ
ನೇಮಿಸಿದ ಕಾರ್ಯಮೀ ಚಂದ್ರಹಾಸಂ ಮಹಾಹಿತನೆಮಗೆ ಮೇಲೆ ನಮ್ಮ ॥
ಸೀಮೆಗರಸಾದಪಂ ಸಂದೇಹಮಿಲ್ಲಿದಕೆ
ನಾಮಾನ್ಯದವನಲ್ಲ, ನಮಗೆ ಮುಂದಕೆ ಸರ್ವ
ಧಾಮಿತ್ರನಪ್ಪನೆಂದೀತನಂ ಕಳುಹಿದೆವು ನಿನ್ನ ಬಳಿಗಿದನರಿವುದು ॥ ೨೫ ॥

ಹೊತ್ತುಗಳೆಯದೆ, ಬಂದ ಬಳಿಕಿವನ ಕುಲಶೀಲ
ವಿತ್ತ ವಿದ್ಯಾ ವಯೋ ವಿಕ್ರಮಂಗಳನೀಕ್ಷಿ
ಸುತ್ತಿರದೆ, ವಿಷವ ಮೋಹಿಸುವಂತೆ ಕುಡುವುದೀತಂಗೆ ನೀನದರೊಳೆಮಗೆ ॥
ಉತ್ತರೋತ್ತರಮಪ್ಪುದೆಂದು ಬರದಿಹ ಲಿಪಿಯ
ನೆತ್ತಿ ವಾಚಿಸಿ ನೋಡಿ ತರಳಾಕ್ಷಿ ತಾನದಕೆ
ಮತ್ತೊಂದಭಿಪ್ರಾಯಮಂ ತಿಳಿದಳುಲ್ಲಂಘಿಸುವರುಂಟೆ ವಿಧಿಕೃತವನು ॥೨೬॥

* ನೆರೆಯಲೆಳಸುವಳೊಮ್ಮೆ ‡ ಬೇಟ

ಈತಂ ತಮಗೆ ಮಹಾಹಿತನೆಂದು, ತಮ್ಮ ಧರೆ
ಗೀತನರಸಹನೆಂದು, ಕುಲ ಶೀಲ ವಿತ್ತಗಳ
ನೀತನೊಳರಸಬೇಡವೆಂದು, ಮುಂದಕೆ ಸರ್ವಥಾ ಮಿತ್ರನಪ್ಪನೆಂದು ||
ಈತಂಗೆ ವಿಷಯೆ ಮೋಹಿಸುವಂತೆ ಕೊಡುವುದೆಂ
ದಾ ತಾತನಣ್ಣಂಗೆ ಬರಸಿ ಕಳುಹಿದ ಪತ್ರ
ವೇ ತಪ್ಪದಿದು, ವರ್ಣಪಲ್ಲಟವು ಮೋಸವೆಂದಬಲೆ ಭಾವಿಸುತಿರ್ದಳು ॥ ೨೭ ॥

ಕಡು ಚೆಲ್ವನಾದ ವರನಂ ಕಂಡು, ನಿಶ್ಚೈಸಿ
ತಡೆಯದೊಲಿದೀತಂಗೆ ವಿಷಯೆ ಮೋಹಿಸುವಂತೆ
ಕೊಡುವುದೆಂದಲ್ಲಿಂದ ತನ್ನ ಪಿತನೀತನಂ ಕಳುಹಿದಂ ಸುತನ ಪೊರೆಗೆ ॥
ಒಡಗೂಡದಿರದೆನ್ನ ಮನದೆಣಿಕೆ, ಪತ್ರಿಕೆಯೊ
ಳೆಡಹಿ ಬರದಕ್ಕರದ ಬೀಳಿರ್ದಡಿದರಿಂದ
ಕೆಡುವುದಗ್ಗದ ಕಜ್ಜವೆಂದಾ ತರುಣಿ ತಾ*ನದಂ ತಿದ್ದಲನುಗೈದಳು ॥ ೨೮ ॥

ತಪ್ಪಿರ್ದ ಲಿಪಿಯೊಳ್ವಿಕಾರಮಂ ತೊಡೆದಲ್ಲಿ
ಗೊಪ್ಪುವ ಯೆಕಾರಮಂ ಕೆಲಬಲದ ಮಾಮರದೊ
ಳಿಪ್ಪ ನಿರ್ಯಾಸಮಂ ತೆಗದು, ಕಿರಿವೆರಳುಗುರ್ಗೊನೆಯಿಂದ ತಿದ್ದಿ ಬರದು ॥
ಅಪ್ಪಂತೆ ಮೊದಲಿರ್ದ ಮುದ್ರೆಯಂ ಸಂಗಡಿಸಿ
ಕುಪ್ಪಸದ ಸೆರಗಿನೊಳ್ಕಟ್ಟಿ, ಪಳಯವೊಲಿರಿಸಿ
ಸಪ್ಪುಳಾಗದ ತೆರದೊಳೆದ್ದು ಮೆಲ್ಲನೆ ಮಂತ್ರಿಸುತೆ ತಿರುಗಿ ಬರುತಿರ್ದಳು॥೨೯॥

ದಿಟ್ಟಿ ಮುರಿಯದು, ಕಾಲ್ಗಳಿತ್ತ ಬಾರವು, ಮನಂ
ನಟ್ಟು ಬೇರೂರಿದುದು, ಕಾವನಂಬಿನ ಘಾಯ
ವಿಟ್ಟಣಿಸಿತಂಗಲತೆ ಕಾವೇರಿತೊಡಲೊಳಗೆ ವಿರಹದುರಿ ತಲೆದೋರಿತು ||
ಬಟ್ಟೆವಿಡಿದೊಡನೊಡನೆ ತಿರುತಿರುಗಿ ನೋಡುತಡಿ
ಯಿಟ್ಟಳಾಚೆಗೆ, ಬಳಿಕ ಬೆರಸಿದಳ್ಕೆಳದಿಯರ
ಘಟ್ಟನೊಳ್ಸಂಭ್ರಮದ ಸಂತಾಪವೆಡೆಯಾಟದಂತರಂಗದ ಬಾಲಕಿ ||೩೦||

* ತಾತನಂ

ಆಳಿಯರ್ ಕಂಡರೀಕೆಯ ಮೊಗದ ಭಾವಮಂ,
ಕೇಳಿದರಿದೇನೆಲೆ ಮೃಗಾಕ್ಷಿ, ತಳುವಿದೆ, ಮನದ
ಬೇಳಂಬಮಾವುದುಕ್ಕುವ ಹರುಷ ರಸಮೊಡನೆ ಬೆರಸಿಹುದು ಬೆವರುವೊನಲು॥
ಗಾಳಿ ಪರಿಮಳವನಡಗಿವುದಂಟೆ ? ತನು† ಚಿತ್ತ
ದಾಳಾವಮಂ ಮಾಜಲರಿದವುದೆ, ಸಾಕಿನ್ನು,
ಹೇಳದಡೆ ಮಾಣಲಂತಸ್ಥಮಂ ತಾನೆಯುಬ್ಬುವುದೆಂದು ನಗುತಿರ್ದರು॥೩೧॥

ಕೆಳದಿಯರ ನುಡಿಗೆ ನಸುನಗುತ, ನಿಜ ಭಾವಮಂ
ಮೊಳೆಗಾಣಿಸದೆ, ಪ್ರುಸಿಗೆ ಸರಸವಾಡುತ, ವೃತ್ತ
ಗಳೆವ ಮಂತ್ರಿಜನಹಿತ ತಿರುಗಿದಳ್ಬನದಿಂದ ಮನೆಗೆ ಚಂಪಕಮಾಲಿನಿ ||
ವೊಳಲೊಳ್ವಿವಾಹೋತ್ಸವಂಗಳಾ ಸಮಯದೊಳ್
ಸುಳಿದವಗ್ಗದ ನೃತ್ಯ–ಗೀತ–ವಾದ್ಯಂಗಳಿಂ
ಕಳಸ ಕನ್ನಡಿಗಳ ವಿಲಾಸದ ಪುರಂಧ್ರಿಯರ ಶೋಭನದ ಸುಸ್ವರದೊಳು ||೩೨||

ಪದುಳದಿಂದೈತಂದು ಬಾಲಕಿಯರಂ ಕಳುಹಿ
ಸದನಮಂ ಪೊಕ್ಕಳವನೀಶ್ವರಾತ್ಮಜೆ ಬಳಿಕ
ಮದುವೆಗಳ ಮಂಗಳೋತ್ಸವದ ಮಧುರ ಸ್ವನಂಗಳನಾಲಿಸುತ ಮನದೊಳು ||
ಇದು ಶುಭನಿಮಿತ್ತಮಿಂದೆನಗೆ ವೈವಾಹದ
ಭ್ಯುದಯಮಾದವುದು ಕಾಂತನೊಳೆಂಬೆಣಿಕೆಯಿಂದ
ಮದನಶರದಿಂದ ಪೀಡಿತೆಯಾಗಿ, ಮಂತ್ರಿಸುತೆ ಮನೆಗೆ ಬಂದಿರುತಿರ್ದಳು ||೩೩||

ಪುರುಹೂತಸಂಭೂತ ಕೇಳ್, ಭವನದೊಳ್ವಿಷಯೆ
ವಿರಹತಾಪದೊಳೊಂದು ಗಳಿಗೆಯಂ ಪತ್ತು ಸಾ
ವಿರ ಯುಗಕೆ ಸಮನಾಗಿ ಭಾವಿಪಳ್, ನಿಂದಲ್ಲಿ ನಿಲ್ಲಳಾರಂ ನೋಡಲು ॥
ಪರಿಚರಿಯದಬಲೆಯರನಗ್ಗಿಸುವಳಾಪ್ತ ಸಖಿ
ಯರ ಮಾತನಾಲಿಸಳ್, ಸಿಂಗರಕೆ ಮೈಗುಡಳ್,
ಕರೆವ ಪಂಜರದ ಗಿಳಿಯಂ ನುಡಿಸಳಾಡಿನಳ್ಸಾಕು ಮಿಗವಕ್ಕಿಗಳನು ||೩೪||

† ಜೀವ ಮನದಾಳಾವಮಂ

ಉಣ್ಣಳೊರಗಳ್ನುಡಿಯಳುಡಳಿಡಳೊತ್ತಡಳುರಿಗೆ
ತಣ್ಣಸವನರಸುವಳ್, ಸುಕುಮಾರ ತನು ತನಗೆ
ತಿಣ್ಣವೆಂದಲಸುವಳ್ಬಸುಸುಯ್ವಳೇನಿದೆಂದಂಡಲೆದು ಕೇಳ್ವವರೊಳು ||
ಕಣ್ಣಳವನೊದವಿಪಳ್, ಶೈತ್ಯ ವಸ್ತುಗಳಿಂದ
ಪಣ್ಣಿದುಪಚಾರಮಂ ಹೃದಯದೊಳ್ ನೀರ್ವೊಯ್ದು
ನುಣ್ಣವರಕ್ಷಂತಾಡುಡೆಂದು ಕಾತರಿಸುವಳಬಲೆ ಕಾಮತಾಪದಿಂದ ||೩೫||

ಜಲಯಂತ್ರದೆಡೆಯೊಳ್, ತಳಿರ್ವಸೆಯ ತಾಣದೊಳ್,
ಮಲಯಜದ ಮಾಡದೊಳ್, ಶಶಿಕಾಂತವೇದಿಯೊಳ್,
ಸುಲಲಿತ ಲತಾಮಂಟಪದೊಳೆಸೆವ ತಂಗೊಳದ ತಡಿಯ ಪುಳಿನಸ್ಥಳದೊಳು ||
ಎಳವೆಲರ ಪರಿಮಳದ ಪಲ್ಲವದ ಕುಸುಮ ಸಂ
ಕುಲದ, ಹಂಸದ ಗಿಳಿಯ ಕೋಗಿಲೆಯ ಕಕ್ಕನಕೆ
ನಿಲಲರಿಯದುಪ್ಪರಿಗೆಮದಿಸಲೆಯ ಚಂದ್ರಶಾಲೆಗೆ ಬಂದಳಂಬುಜಾಕ್ಷಿ ||೩೬||

ಅಲ್ಲಿ, ನಿಜ ಸಖಿಯರಬಲೆಯ ಚಿತ್ತದಾಸರಂ
ಮೆಲ್ಲಮೆಲ್ಲನ ತಪಿಸಲೆಂದುಪಚರಿಸಲವರ
ಸಲ್ಲಲಿತ ಮುಖವಾಣಿ, ಲೋಚನ, ಭ್ರೂ, ಕುಂತಳಾಧರಂಗಳನೀಕ್ಷಿಸಿ ||
ತಲ್ಲಣಿಸಿ ತಿಂಗಳರಗಿಳ ಪೂಸರಳ್ಕಬ್ಬ
ವಿಲ್ಲಾರಡಿಗಳೊಳು ತಳಿರ್ಗಳೆಂದೆಣಿಸಿ ಸು–
ಗ್ಗಿಲ್ಲಿದೊಳ್ಕೈಯುಟ್ಟು, ಜೆರಗಾಗಿ, ಚಿಂತಿಸುವ ತೆರಮೊಳವಳಿರುತಿರ್ದಳು ||೩೭||

ಪಾವಗಿದುಳಿದರುಂಟೆ ? ಹರನ ಕೋಪದೊಳುರಿದು
ಜೀವಿಸಿದರುಂಟೆ ? ಕಾಳ್ಗಿಚ್ಚಿನೊಳ್ಕೆಳೆಗೊಂಡು
ಜೀವೃತಸುವಿಡಿದು ಬಾಳುವರುಂಟೆ ? ಚಂದ್ರಮನ್ಮಥ ಪವನರಬಲೆಯರ್ಗೆ ||
ಹಾವಳಿಯನೊದಗಿಸುವೆವೆಂದು ಬದುಕಿದರಲ್ಲಿ
ದಾವ ಕರುಣಿಗಳಿವರ್ವಿರಹಪೀಕೆಯ ಮನದೊ
ಳಾವರಿಸಲೇನಹುದೊ ಶಿವಶಿವಾ ! ತಾಳಲರಿದೆಂದೊರ್ವ ಸಖಿ ನುಡಿದಳು
||೩೮||

ಬೆಳವಿಗೆಗೆ ಸುರರೊಂದು ಕಳೆಯನೇಕುಳಿಹಿದರೊ ?
ಮುಳಿದಂದು ಶಿವನೇಕೆ ಮತ್ತೆ ಕರುಣಿಸಿದನೋ ?
ಮೆಲುತ ಮೆಲುತೇಕೆ ಬಿಟ್ಟುವೊ ಫಣಿಗಳೆಂದು ಶಶಿ-ಮದನ-ಮಂದಾನಿಲರನು॥
ಸಲೆ ಬೈದು, ಕೋಗಿಲೆಯ, ತುಂಬಿಗಳ, ಗಿಳಿಯ, ಕಳ
ಕಳಕೆ ವಾಯಸವಂ, ಸರೋಜಮಂ, ತನ್ನ ಕರ
ತಳಮಂ, ಜರೆದು ನಿಂದಿಸಿದಳೊರ್ವ ಸಖಿ ಬಾಲೆಯಂ ನೋಡಿ ಬಿಸು
ಸುಯ್ಯುತ ॥೩೯॥

ಇವಳ ಮನದೆಣಿಕೆ ಕೈಗೂಡಲಾವೆಲ್ಲರುಂ
ವಿವಿಧ ಕುಸುಮೋತ್ಕರ ಸುಗಂಧಾಕ್ಷತೆಗಳಿಂದ,
ನವ ಪಕ್ವ ಫಲಮೋದಕಾದಿ ನೈವೇದ್ಯದಿಂ ಧೂಪ ದೀಪಂಗಳಿಂದ ॥
ಶಿವನ ವಲ್ಲಭೆಯನರ್ಚಿಸಿ, ವರುಷ ವರುಷಕು–
ತ್ಸವದಿಂದ ನೋಂಪಿಯಂ ಮಾಳ್ಪೆವೆಂದಾ ಸಕಲ
ಭುವನಮಾತೆಯನುಮಾದೇವಿಯಂ ಗೌರಿಯಂ ಪ್ರಾರ್ಥಿಸಿದರಾಸಖಿಯರು
॥೪೦॥

ಪ್ರಾಸಾದದಗ್ರದೇಳನೆಯ ನೆಲೆಯೊಳ್, ಚಂದ್ರ
ಹಾಸನೈತಹ ಮಾರ್ಗಮಂ ನೋಡುತುಪಚರಿಸು
ವಾ ಸಖೀ ಜನದ ನುಡಿಗಳನಾಲಿಸುತ, ವಿಷಯೆ ಚಿತ್ತದೊಳ್ತನ್ನ ಪಿತನ ॥
ಶಾಸನವನಿಂದು ಮದನಂ ಪಾಲಿಪಂತೆ, ನೀಂ
ಸೂಸು ಕಾರುಣ್ಯವರುಷವನೆನ್ನ ಮೇಲೆಂದು
ಮಾ†ನದತಿ ಭಕ್ತಿಯಿಂ ಬೇಡಿಕೊಳುತಿರ್ದಳಾನತೆಯಾಗಿ ಪಾರ್ವತಿಯನು
॥ ೪೧ ॥

ವಿಜಯ ಕೇಳ್, ಇತ್ತ ವನದೊಳ್ಚಂದ್ರಹಾಸನಂ
ಬುಜಮಿತ್ರನಪರಾಹ್ಣಕೈದಲ್ಕೆ, ನಿದ್ರೆಯಂ
ತ್ಯಜಿಸಿ ಮೊಗದೊಳದು, ಮುಕ್ಕುಳಿಸಿ, ಕಪ್ಪುರವೀಳೆಯಂಗೊಂಡು
ಬಳಿಕ ಬಿಗಿಸಿ ॥
ನಿಜ ವಾಜಿಯಂ ಬಂದಡರ್ದನುಚರರ್ವೆರಸಿ
ರುಜುವಾದ ಶಕುನಂಗಳಂ ಕಾ‡ಣುತೊಲಿದು, ಪೌ
ರಜನಮಿವನಾರೆಂದು ನೋಡಲ್ಕೆ,ನಗರಮಂ ಪೊಕ್ಕು ನಡೆತರುತಿರ್ದನು॥೪೨॥

---

† ಮಾಸುದತಿ ‡ ಕೇಳುತೊಲಿದು

ಆ ನಗರದೊಳ್, ಕುಂತಳೇಶ್ವರಂ ನಿರ್ಮಲ
ಜ್ಞಾನದಿಂ ಗಾಲವನ ಸೂಕ್ತಮಂ ಕೇಳುತ, ಸ
ದಾನಂದಯೋಗಮಂ ಕೈಕೊಂಡು, ದುಷ್ಟಬುದ್ಧಿಗೆ ವಿಚಾರವನೊಪ್ಪಿಸಿ, ॥
ಧ್ಯಾನಪರನಾಗಿರ್ಪನದರಿಂದ ಪೊಳಲಂ ಪ್ರ
ಧಾನಿ ಪಾಲಿಪನವಂ ಪೊರಮಟ್ಟಿರಲ್ಕೆ, ತತ್
ಸೂನು ಮದನಂ, ಧುರಂಧರತೆವೆತ್ತಾ ಸಮಯಕೋಲಗದೊಳಿರುತಿರ್ದನು ||೪೩||

ಶ್ರೀಕಂಠನಂ ಕೆಣಕಿ ಮೈಗೆಟ್ಟ ಮದನನಂ
ಲೋಕದೊಳ್ಜರೆವಂತೆ, ಶಂಕರಪ್ರಿಯನಾಗಿ
ನಾಕಾರದಿಂದೆಸವ ಮದನನಿವನೆಂಬಂತೆ, ರಂಜಿಸುವ ಮಂತ್ರಿಸೂನು ||
ವ್ಯಾಕೀರ್ಣ ರತ್ನರೋಚಿಗಳ ಚಾವಡಿಯ ಚಾ
ಮೀಕರದ ಸಿಂಹಾಸನದೊಳಿರ್ದನಿಕ್ಕೆಲದ
ಕೋಕನದ ನೇತ್ರೆಯರ್ಚಿಮ್ಮಿಸುವ ಚಾರು ಚಂಚಲ ಚಾಮರಂಗಳಿಂದ ||೪೪||

ಉಚಿತದಿಂದೊಪ್ಪುವ ಮಹೀಸುರರ, ಭೂಭುಜರ
ನಿಚಯದ, ನಿಯೋಗಿಗಳ, ಗಣಕರ, ಪುರೋಹಿತರ,
ವಚನಕೋವಿದರ, ಕವಿ, ಗಮಕಿಗಳ, ವಂದಿ, ಗಾಯಕ, ನಟರ, ನರ್ತಕಿಯರ ॥
ರುಚಿರದಿಂ ಕೃಷ್ಣಚಾರಿತ್ರಮಂ ಸೊಗಸಾಗಿ
ರಚಿಸುತಿಹ ಭಾವಕರ ಸಂಗೀತಗೋಷ್ಠಿಯಿಂ
ಸಚಿವ ಸುತನೋಲಗಂ ರಮಣೀಯಮಾಗಿರ್ದುದಿಂದ್ರನಾಸ್ಥಾನದಂತೆ ||೪೫||

ಲೀಲೆ ಮಿಗೆ ನಗರದೊಳ್ನಡೆತಂದು, ಮಂತ್ರಿಸುತ
ನಾಲಯದ ಮುಂದೆ ವಾಜಿಯನಿಳಿದು, ತದ್ವಾರ
ಪಾಲಕರ್ಗಿಂದುಹಾಸಂ ಪೇಳ್ದಡವರಂತರಾಂತರದೊಳೆಚ್ಚರಿಸಲು ||
ಏಳನೆಯ ಬಾಗಿಲ ವಿವೇಕನೆಂಬವನಿದಂ
ಕೇಳಿ, ತಾಂ ಪಿಡಿದ ಶ್ರದ್ಧಾಯಷ್ಟಿ ಸಹಿತ ಬಂ
ದೋಲಗದೊಳಿರ್ದ ಮದನಂಗೆ ಬಿನ್ನೈಸಲ್ಪರಾಕಾದಡಿಂತೆಂದನು ॥೪೬||

ಅವಧರಿಸು ಜೀಯ, ನಿಮ್ಮಯ್ಯಂಗೆ ಕ್ರೋಧನೆಂ
ಬವನಾಪ್ತನಾಗಿ, ಹಿಂಸಾಯಷ್ಟಿವಿಡಿದು, ನ
ಲ್ಲವನಲಾ ಬಾಗಿಲ್ಗೆ, ತನಗಾತನಂತೆ ನಿನ್ನೊಳ್ಸಲುಗೆಯುಂಟೆ ? ಬರಿದೆ ॥
ತವ ಭೃತ್ಯನಾಗಿಹೆಂ, ನಾಕದಂತಿರಲಖಿಳ
ಭುವನಕಧಿಪತಿಯಾದ ಮುರಹರನ ಭಕ್ತನ
ಲ್ಲವೆ ಚಂದ್ರಹಾಸನಾತನ ಬರವನರುಪಲೀತಕೆ ಸುಮ್ಮನಿಹೆನೆಂದನು ॥೪೭॥

ನೀತಿಸಮ್ಮತದಿಂ ವಿವೇಕನಿಂತೆನೆ ಕೇಳ್ದು
ಶಾತಕುಂಭಾಲಂಕೃತಾಸನವನಿಳಿದು ಹರು
ಷಾತಿಶಯದಿಂದ ಮದನಂ ಚಂದ್ರಹಾಸನಸಿದಿರ್ವಂದು ಕಂಡು ನಗುತ ॥
ಪ್ರೀತಿಯಿಂದಪ್ಪಿ ಕೈವಿಡಿದೊಡನೆ ಸಭೆಗೆ ತಂ
ದಾತನಂ ಸತ್ಕರಿಸಿ ಚಂದನಾವತಿಯ ತತ್
ಭೂತಳದ ಮೇಧಾವಿನಿಯ ಕುಳಿಂದನ ಕುಶಲದೇಳ್ಗೆಯುಂ ಬೆಸಗೊಂಡನು
॥೪೮॥

ವಿನಯದಿಂ ಮತ್ತೆ ನಸುನಗೆವೆರಸಿ ನಿನ್ನದ
ರ್ಶನಮಿಂದಪೂರ್ವಮಾದುದು, ಬಂದಕಾರ್ಯಮುಂ
ತನಗೊರೆವುದೆಂದು ಮದನಂ ಚಂದ್ರಹಾಸನಂ ಕೇಳ್ದಡಾತಂಗೆ ನಿನ್ನ ॥
ಜನಕನೆನ್ನಂ ನಿನ್ನ ಬಳಿಗತಿರಹಸ್ಯದಿಂ
ದನುಮತಿಸಿ ಕಳುಹಲಾನೈತಂದೆನೆಂದು, ಕುರು
ಪಿನ ಮುದ್ರೆ ಸಹಿತ ನಿಜ ಕರದೊಳಿಹ ಪತ್ರಮಂ ಕೊಟ್ಟನಾತನ
ಕ್ಕೈಯೊಳು ॥೪೯॥

ಇದ್ದವರನಾಸಭೆಯೊಳಿರಿಸಿ, ಶಶಿಹಾಸನಂ
ಗದ್ದುಗೆಗೆ ನೆಲೆಗೊಳಿಸಿ, ಮದನನಾಸ್ಥಾನದಿಂ
ದೆದ್ದಮಲನೆಂಬ ತನ್ನನುಜನಂ ಕೂಡಿಕೊಂಡೇಕಾಂತಭವನಕ್ಕೈದಿ ॥
ಹೊದ್ದಿಸಿದ ಮುದ್ರೆಯುಂ ತೆಗೆದು, ಪತ್ರವನೋದಿ
ತಿದ್ದಿದಕ್ಕರವನರಿಯದೆ, ನಿಜದ ಬರಹಮೆಂ
ದದ್ದನತಿ ಹರುಷಾರ್ಣವದೊಳಾಗ ಶತಯಾಗತನಯ ಕೇಳ್ ಕೌತುಕವನು
॥೫೦॥

ಲೇನಾದುದಯ್ಯನಿಂದೆನಗೆ ನೇಮಿಸಿ ಕಳುಹಿ
ದೀನುವೊಕ್ಕಣೆಗಳ್ಕ್ರಹಾಹಿತಂ ತನಗೀತ
ನೀ ಸೀಮೆಗರಸಾದವಂ, ಸರ್ವಥಾ ಮಿತ್ರನಪ್ಪವಂ ನಿಶ್ಚಯಮಿದು ॥
ಮೋಸವೆ ಕುಲಾಚಾರ ಗತಿಯನಾರೈವಡೆ, ವಿ
ಲಾಸದಿಂ ವಿಷಯೆ ಮೋಹಿಸುವಂತೆ ಕೂಡುವೆನಿದ-
ಕೋಸರಿಸಲೇಕೆ, ತಂಗಿಗೆ ತಕ್ಕ ವರನೀತನೆಂದು ಮದನಂ ತಿಳಿದನು ॥ ೫೧ ॥

ಮುನ್ನ ತಂದೆಯ ನಿರೂಪದ ಕಾರ್ಯಮದರ ಮೇ
ಲಿನ್ನ ಮನವಿವನೊಳಕ್ಕರ್ವೆರಸುತಿದೆ, ರೂಪ
ನುನ್ನಿಸುವೊಡನುಜೆಗೀತಂಗೆ ವಾಸಟ, ವಿಚಾರಿಸೆ ಕೃಷ್ಣಭಕ್ತನಿವನು ||
ಇನ್ನು ಸಂಶಯಮಿಲ್ಲವೀ ಚಂದ್ರಹಾಸಂಗೆ,
ಕನ್ನೆಯಿಂದಲಂದದಕ್ಷಿಯ ತಂಗಿಯಂ ಕೊಟ್ಟು
ಮನ್ನಿಸುವೆನೆಂದು ನಿಶ್ಚೈಸಿ, ಮದನಂ ಮತ್ತೆ ಬಂದನೋಲಗದ ಸಭೆಗೆ॥೫೨॥

ಗಣಿತಜ್ಞರಂ ಕರಿಸಿ, ನೋಡಿಸಿದನಾಗಳನು-
ಗುಣವಾದ ರಾಶಿಕೂಟವನಮಲಲಗ್ನಮಂ
ಗುಣಿಸಿ ವಿಸ್ತರಿಸಿದರ್ಬಳಿಕ, ಮದನಂ ಮಾಡಿಸಿದನೊಸಗೆಯಂ ಪೊಳಲೊಳು||
ಅಣೆದವಭ್ರವನೆಸವ ಗುಡಿ ತೋರಣಂಗಳಿ-
ಟ್ಟಣಿಸಿದವು ಬೇಕಾದ ಮಂಗಳ ಸುವಸ್ತುಗಳು,
ಮಣಿಮಯದ ವೇದಿಯಂ ವಿರಚಿಸಿದರೊಪ್ಪಿನಿಂ ವೈವಾಹಮಂಟಪದೊಳು
॥ ೫೩ ॥

ಬಳಿಕ ಮದನನ ಹೇಳಿಕೆಯೊಳಂದು ವಿದಿತ ಮಂ
ಗಳ ವಿವಾಹೋತ್ಸವ ಕ್ರಿಯೆಗಳಂ ವಿರಚಿಸಿದರ್
ಇಳೆಯ ದಿವಿಜಪುರಂಧ್ರಿಯರೈದೆ ಮಜ್ಜನದ ಮಂಡನದ ಮಾಳ್ಕೆಗಳನು ॥
ಅಳವಡಿಸಿದರ್ವಣೆಯೊಳೆಸವ ಬಾಸಿಗದ ಮದ
ವಳಿಗನಾಗಿರ್ದಂ ಕುಳಿಂದಜಂ, ದೇವಪುರ
ನಿಳಯ ಲಕ್ಷ್ಮೀಕಾಂತನೊಲವಿಂದ ವಿಷಮಮೃತವಹುದು ನೋಜಿಗವೆನಲ್ಕೆ
||೫೪||



# ೩೧ ನೆಯ ಸಂಧಿ

**ಕೃತವಿವಾಹದೊಳುಪಹತಿಗೆ ಕುಹಕವಂ ಮಾಡಿ,**
**ಸುತನೊಡನೆ ಮೃತನಾದ ಮಂತ್ರಿಯಂ ಧರಣಿಗಧಿ**
**ಪತಿಯಾಗಿ ನೆಗಪಿದಂ, ಚಂದ್ರಹಾಸಂ ಚಂಡಿಕಾದೇವಿಯಂ**
**ಮೆಚ್ಚಿಸಿ ॥**

ವಾಸವಾತ್ಮಜ ಕೇಳಲಂಕಾರದಿಂ ಚಂದ್ರ
ಹಾಸನಂ ಮದವಣಿಗನಂ ಮಾಡುತಿರ್ದರ್, ಸು
ವಾಸಿನಿಯರುತ್ಸವದೊಳಿಂತೆಂದು ಮದನನಂತಃಪುರದೊಳೆಚ್ಚರಿಸಲು ॥
ಪ್ರಾಸಾದದಗ್ರದೊಳ್ತಪಿಸುತಿಹ ವಿಷಯೆಗೆ, ವಿ
ಳಾಸಿನಿಯರ್ಬೈತಂದು ನುಡಿದರಂಬುಜವನಕೆ
ನೇಸರುದಯಿಸುವ ಕಾಲದ ಮುಂದೆ ತಂಪಿಡಿದು ಬೀಸುವೆಳಗಾಳಿಯಂತೆ ॥ ೧ ॥

ಸೊಗಯಿಸುವ ಪಚ್ಚಗಪ್ಪುರದ ಪುಡಿಯಂ ಮೈಗೆ
ತಿಗುರಿದಡೆ, ಬಾವನ್ನದೊಳ್ಗಿಸರನೆಸವ ಕುಚ
ಯುಗದೆಡೆಗೆ ಮೆತ್ತಿದಡೆ, ಕಣ್ಣೆವೆಗೆ ಪನ್ನೀರನೊಡನೊಡನೆ ತೊಡೆವಡದಕೆ॥
ಮಿಗೆ ಪೆಚ್ಚಿತುರಿಯೆಂದು ಮತ್ತೆ ಸಿಡಿಮಿಡಿಗೊಂಡು,
ಮುಗುಳಂಬನುರುಬೆಗಾರದೆ ಪೊರಳ್ವ ಮಂತ್ರಿಪನ
ಮಗಳೆಡೆಗೆ ಪರಿತಂದು, ನುಡಿದಳೊಸಗೆಯನಾಪ್ತಸಖಿಯೊರ್ವಳವಳಕೂಡೆ ॥ ೨ ॥

ಚಿಂತೆಯಂ ಬಿಡು ತರಳೆ, ಕೈಸಾರ್ದುದೀಗ ನಿ
ನ್ನಂತರಂಗದ ಒಯಕೆ, ಶಶಿಹಾಸನೆಂಬವಂ
ಕಂತು ಸಮನಾಗಿಹಂ, ನೀನದೇಂ ಪುಣ್ಯಮಂ ಮಾಡಿದೆಯೊ ಮುನ್ನಿಳೆಯೊಳು ||
ಕುಂತಳೇಂದ್ರನ ಕುವರಿ, ನಗುತ ಸರಸದೊಳಾಡಿ
ದಂತಾಯ್ತು, ತಂದೆ ಕಳುಹಿದ ಲೇಖನವನೋದಿ
ಸಂತಸದೊಳಿಂದು ಮದನಂ, ನಿನ್ನನಾತಂಗೆ ಕೊಡುವನೆಂದವಳೊರೆದಳು||೩||

ರಜ್ಜು ಬಂಧವನುಗಿದ ಮೃಗದಂತೆ, ತಾಂ ನೆನೆದ
ಕಜ್ಜವೊಡಗೂಡಲ್ಕೆ ಮೊಗಮರಳ್ವುದು, ಬಳಿಕ
ಲಜ್ಜೆ ಮೊಳೆದೋರಿದುದು, ತಲೆವಾಗಿ ನೆಲವನುಂಗಟದಿಂದ ಬರೆಯುತಿರಲು||
ಉಜ್ಜುಗವಿದೇನಬಲೆ ? ನಾಕು, ನಡೆ, ಮಂಗಳ ಸು
ಮಜ್ಜನದ ಮನೆಗೆಂದು ಕಮಲಾಯತಾಕ್ಷಿಯಂ
ತಜ್ಜನನಿ ಕಳುಹಿದ ಸಿತಂಬಿನಿಯರುಪ್ಪರಿಗೆದುದಿಯಿಂದಿಳಿಸಿ ತಂದರು ॥ ೪ ॥

ವರ ಶಾತಕುಂಭ ಕುಂಭಸ್ತನದ, ಪಲ್ಲವಾ
ಧರವರುಣರಾಜಿ, ರಾಜಿತದ ಕೋಮಲೆಗೆ ನೌಂ
ದರ ಕುಂಕುಮಾಂಗ ಮಾಂಗಲ್ಯದಬಲೆಯರುದಕಪೂರಿತ ಕನಕಕಲಶದ ॥
ಸುರುಚಿವೆತ್ತರುಣ ತರುಣಪ್ರವಾಳದ ವಸ್ತ್ರ
ಪರಿವೃತದ ಕಲ್ಪ ಕಲ್ಪ ವಿಧಾನವಾಗಿರದೆ
ವಿರಚಿಸಿದರಾಗ, ರಾಗದೊಳಮಲ ಶೋಭನಸ್ನಾನಮುವರುತ್ಸವದೊಳು॥ ೫ ॥

ಮುಟ್ಟಿದರೆ ಕಂದದಿರದಿವಳ ಸುಕುಮಾರ ತನು,
ದಿಟ್ಟಿಯರದೆಂತೊ ! ನವ ಕುಂಕುಮವನೀಗ ನುಂ
ಪಿಟ್ಟರಲ್ಲದೆ, ಪೋದ ಮಧ್ಯದೊಳದೆಂತು ನಿಲಿಸಿದರೊ ದಿವ್ಯಾಂಬರವನು ||
ಬಟ್ಟ ಮೊಲೆಗಳ ಹೊರಗೆ ಬಾಗಿ ನಡೆವಳ್ಗೆಂತು
ಕಟ್ಟಿದರೊ ಹಾರಾವಳಿಯನೆಂ*ದು, ಕೌತುಕಂ
ಬಟ್ಟು ನೋಡುವೊಲೆಸೆದಳಾ ವಿಷಯೆ, ಬಳಿಕಲಂಕಾರಮಂಡಿತೆಯಾದಳು
|| ೬ ||

ಬಾವನ್ನಗಂಪಿನಂಗದ ಲಲನೆಗನುಲೇಪ
ನಾವಳಿಗಳೇಕಿನ್ನು ? ಕಸ್ತೂರಿಕಾತಿಲಕಕ್ಕೆ
ಭಾವಿಸೆ ಲಲಾಮವೇತಕೆ ವಣೆಗೆ ? ಸೋವಡಗದವಯವದೊಳಿಂಪುವಡೆದ ||
ಪೂ†ವಸರ ಕೋಮಲೆಗವೇಕೆ ಕುಸುಮದ ಮಾಲೆ ?
ಲಾವಣ್ಯ ಭೂಷಣದ ವೆಣ್ಗಾಭರಣವೇಕೆ ?
ಕೋವಿದೆಯರಲ್ಲ ! ಸೈರಂಧ್ರಿಯರೆನಲ್ಕೆ ವಿಷಯೆಗೆ ಸಿಂಗರಂಗೈದರು || ೭ ||

---

* ನೊಂದು † ವೆಸಳ

ಅಪರ ದಿಗ್ಭಾಗದಂತಂಜನೋದ್ಭಾಸಿತಂ,
ವಿಪುಲ ಹರಿಪದದಂತೆ ತಾರಕಾಲಂಕೃತಂ,
ಲಿಪಿಯಂತೆ ದೀರ್ಘಶೋಭಾನ್ವಿತಂ, ದ್ವಿಜನಂತೆ ಶ್ರುತಿಯುತಂ, ದೈತ್ಯನಂತೆ॥
ಅಪಹೃತಾನಿಮಿಷ ಲೀಲಾ ವಿ*ಲಾಸಂ, ನರಾ
ಧಿಪನಂತೆ ಕುವಲಯಶ್ರೀಧರಂ, ಘನದಂತೆ
ಚಪಲಾಭಿರಾಮಮಾಗಿರ್ದುದಾ ಶಶಿಮುಖಿಯ ನೇತ್ರಯುಗಮೇವೇಳ್ವೆನು
॥ ೮ ॥

ಉಲ್ಲಾಸ ತಿಲಕಮುಂ, ಸುತಮಾಲ ಪತ್ರಮುಂ,
ಮೊಲ್ಲೆಯ ಮುಗುಳ್ಗಳುಂ, ಚೂತಪ್ರವಾಳಮುಂ,
ಮಲ್ಲಿಗೆಯಲರ್ಗಳುಂ, ಸಂಪಗೆಯ ಮೊಗ್ಗೆಯುಂ ನಿಂಬದಳಮುಂ,
ತೊಳಗುವ ॥
ನಲ್ಲಲಿತ ಸಾಲಕಾನನದೊಳಿರ್ದಪವು ಪೊಸ
ತಲ್ಲೆಂಬ ತೆರನಾದುದೆಂತು ಬಣ್ಣಿಸುವೆನೀ
ಚೆಲ್ಲೆಗಂಗಳ ಚೆಲ್ವಿಕೆಯೊಳೆಸೆವ ಬಾಲಕಿಯ ನಗೆಮೊಗದ ಸೌಂದರವನು॥೯॥

ಶ್ರವಣ ಭೂಷದಿಂದ, ಹಸ್ತಾಭರಣದಿಂದ
ದಿವಿಜಪಥಮೆಸವಂತೆ ಕುಂತಳಶ್ರೀಯ ವೈ
ಭವದಿಂದ, ರಮಣೀಯ ಕಾಂಚೀಪ್ರದೇಶದಿಂ ಭೂಭಾಗಮೊಪ್ಪುವಂತೆ ॥
ತವೆ ಮೆರೆವ ಸುಗ್ರೀವ–ತಾರಾವಲಂಬದಿಂ–
ದವಿಕಲಾಂಗದ ವಿರಾಜಿತದಿಂದ, ಸನ್ನುತ
ಪ್ಲವಗಕುಲದುನ್ನತಿ‡ಬೆಳಗುವಂತೆ ಚೆಲ್ವಿಂದ ವಿಷಯೆ ಕಂಗೊಳಿಸಿರ್ದಳು
॥೧೦॥

ಲಾವಣ್ಯವಾರಿಪೂರಿತವಾದ ನಾಭೀ ಸ
ರೋವರದ ತ್ರಿವಳಿದೆರೆಗಳ ನಡುವೆ ರಂಜಿಸುವ
ಶೈವಾಲದಂತೆ, ಜಘನಾದ್ರಿಯಂ ವೇಡೈಸಿದಮಲ ಕಾಂಚೀದಾಮದ,॥
ದಾವಶಿಖಿಯಿಂದ ನಭಕೇಳ್ವ ಕರ್ಬೊಗೆಯಂತೆ,
ಪೀವರಸ್ತನದುರ್ಗಕಂಗಜನಡರ್ದಿಳಿವ
ಠಾವಿನಂತಾ ಚಂದ್ರಮುಖಿಯ ತನುಮಧ್ಯದೊಳ್ಬಾಸೆ ಕಂಗೊಳಿಸಿರ್ದುದು
॥೧೧॥

---

* ವಿಲಂಬಂ ‡ ಕುಲದುನ್ನತಿಯ ಬೆಳವಿಗೆಯ

ಬಿಡದೆ ಮುಕ್ತಾಹಾರದಿಂದ ಸಮರೂಪದಿಂ
ದೃಷತೆವೆತ್ತೂರ್ಧ್ವಮುಖವಾಗಿ, ಕರ್ಕಶವೃತ್ತ
ದೊಡಗೂಡಿ ಕುಚಯುಗಂ ಮೆರೆದುದು ಕಠೋರತಪದಿಂದೆಸವ ಯೋಗಿ
ಯಂತೆ, ॥

ಬಡವಾಗಿ ಬಲ್ಲಿದರ ನಡುವೆ ನವೆದಿರ್ದು, ಸೊಂ
ಪುಡುಗದೆ ವಿಜೃಂಭಿಸುವ ವೀರ ಕಂಠೀರವಕೆ
ಪಡಿಯಾಗಿ, ಸತ್ಪುರುಷನಂದದೊಳ್ಕಾಣಿಸಿತು ಮಧ್ಯಲತೆ ಮಂತ್ರಿಸುತೆಯ
॥ ೧೨ ॥

ತೊಳಗಿ ಬೆಳಗುವ ಸದ್ಗುಣಾವಳಿಗಳೈಶ್ವರ್ಯ
ಲಲನೆಯಂ ಗೃಹಪತಿಯ ಮಂದಿರಕೆ ಸಂಗಡಿಸಿ,
ಬೆಳವಿಗೆಯನತಿಶಯಂ ಮಾಳ್ಪಂತೆ ಸಿಂಗರಂಗೈದು ನೀಲಾಳಕಿಯರು ॥
ಒಳಿಕ ಹೊನ್ನಂದಣದ ಮೇಲೆ ವೈವಾಹಮಂ-
ಗಳ ಮಹೋತ್ಸವಕೆ ವಿರಚಿಸಿದ ಮಂಟಪದೆಡೆಗೆ,
ನಳಿನಪತ್ರಾಕ್ಷಿಯಂ ತಂದರೊಸಗೆಯೊಳಂದು ವಿಭವದ ವಿಳಾಸದಿಂದ ॥೧೩॥

ಬಳಸಿದ ಸಮಸ್ತ ಜನಜಂಗುಳಿಯ ಕೈನೊಡ
ರ್ಗಳ ನಾಲಸಂದಣಿಯ ಪಾಡುವ ಪುರಂಧ್ರಿಯರ,
ಕಳಸ ಕನ್ನಡಿವಿಡಿದ ಕನ್ನೆಯರ ನಾನಾ ಸುವಸ್ತುಗಳ ವಿಸ್ತರಣದ ॥
ತೊಳಗುವೆಸಗೆಯ ವಾದ್ಯಸಂಕುಲದ, ಬಹು ಫಲಾ
ವಳಿಗಳ, ವಿಡಾಯದಿಂದೈತಂದು ದಂಡಿಗೆಯ
ನಿಳಿದನಾರತಿಗಳ ನಿವಾಳಿಯಿಂ ಚಂದ್ರಹಾಸಂ ಭದ್ರಮಂಟಪದೊಳು ॥೧೪॥

ವರತಾರಕಾಕ್ಷಿಯೆಂಬಾ ಪ್ರಧಾನಿಯ ಪತ್ನಿ
ಚರಣಮಂ ಪ್ರಕ್ಷಾಳನಂಗೈಯೆ, ಮದನನಾ
ದರಿಸಿ ಮಧುಪರ್ಕಮಂ ಮಾಡೆ, ಕನ್ಯಾವರಣದೊಳ್ಕುಲಪರಂಪರೆಯನು ॥
ಒರೆಯೆನಲು, ಶಶಿಹಾಸನೆನಗೆ ವಾಮನಗೋತ್ರ
ಮರವಿಂದನಾಭಂ ಪಿತಂ, ಹರಿ ಪಿತಾಮಹಂ,
ಮುರಹರಂ ಪ್ರಪಿತಾಮಹಂ, ಕುಳಿಂದನುಮವನ ಸತಿಯುಂ ಗುರು
ಗಳೆಂದನು ॥ ೧೫ ॥

ಅಲ್ಪ ಭಾಷಿತಮಲ್ಲದಿಹ ಚಂದ್ರಹಾಸನ ಸು
ಜಲ್ಪಿತಂ ಸೊಗಸೆ, ಮದನಂ ಮುದದೊಳಾಗ, ಸಂ
ಕಲ್ಪಿಸಿ*ನೀರಿಕ್ಷಣಂಗೆಯ್ದು ಸುಮುಹೂರ್ತಮಂ ತೆರೆವೆಗಸಿ ಭೂದಿವಿಜರ ॥
ನಲ್ಪರಕೆವೆತ್ತು ಜೀರಿಗಿ ಬೆಲ್ಲದೊಪ್ಪಮೆಸೆ
ಯಲ್ಪದದ ಮೆಟ್ಟಕ್ಕಿ, ಸುತ್ತು ನೂಲ್ಕರಿಯೆ, ಫಣಿ-
ತಲ್ಪನಿದಿರೊಳ್ತದರ್ಪಿತಮಾಗಲೆಂದವನ ಕೈಗೆ ಧಾರೆಯನೆರೆದನು ॥೧೬॥

ಮೊರೆವ ಮರಿದುಂಬಿಗಳ ಮಾಲೆಯುಂ ತಾಳ್ದ, ನವ
ಪರಿಮಳದ ಮಂದಾರ ಮಾಲೆಯುಂ ವಿಷಯೆ, ಸೌಂ
ದರ ಶಿರೀಷದ ಮಾಲೆಯುಂ ಪೋಲ್ವ ನಳಿತೋಳ್ಗಳಿಂದ ಕಂಧರವೊಳಿಡಲು ||
ಭರಿತ ಲಾವಣ್ಯ ಸಾಕಾರದಿಂ, ಮಂಗಳಾ
ಭರಣಂಗಳೆಸವಲಂಕಾರದಿಂ, ವಾರ್ವರು-
ಚ್ಚರಿವಗ್ನಿಹೋತ್ರ ಪ್ರಕಾರದಿಂ, ವಧುವಂ ಕುಳಿಂದಜಂ ಕೈವಿಡಿದನು ||೧೭||

ಮುಂದೆ ವಿರಚಿಸಿದ ವೇದಿಯೊಳೆಸವ ಹಸೆಗೆ ನಡೆ
ತಂದು ಪಾಣಿಗ್ರಹಣಮಂ ಗೈದ, ಲಾಜಾಜ್ಯ
ದಿಂದ ಹೋಮದೊಳಗ್ನಿಯಂ ಬೆಳಗೆ, ವಿಪ್ರರಾಶೀರ್ವಾದಮಂ ಮಾಡಲು ||
ಬಂದು ತಿಲಕವನಿಟ್ಟು, ಪತ್ರಫಲಮಂ ಕೊಟ್ಟು,
ಪೊಂದಳಿಗೆವಿಡಿದಾರತಿಯನೆತ್ತಲೈದೆಯರ್,
ಕಂದರ್ಪ ರತಿಗಳ ವಿವಾಹಮೆನೆ, ಕಂಗೊಳಿಸಿತಾದಂಪತಿಗಳ ಮದುವೆ||೧೮||

ತತ್ಕಾಲದೊಳ್ ಮದನನಾ ಚಂದ್ರಹಾಸನಂ
ಸತ್ಕರಿಸಿ, ಬಳುವಳಿಗೆ ಬಹಳ ಗೋ-ಮಹಿಷಿ-ಬಲ-
ವತ್ಕರಿ-ತುರಂಗ-ರಥ-ಶಯ್ಯಾಸನಂಗಳಂ, ವಳಿತ-ವಾಹನ-ಪದವನು, ॥
ಉತ್ಕೃಷ್ಟ ಪರಿಮಳ ದ್ರವ್ಯಸಂಕುಲಮಂ, ಚ
ಮತ್ಕಾರದಬಲೆಯರನಂಬರಾಭರಣ ವಿಲ
ಸತ್ಕಾಂತಮಾಲೆಗಳನಿತ್ತನೆಂದುಂ ಬಳಸಿ ತೀರದಿಹ ವಸ್ತುಗಳನು ॥೧೯॥

---
* ನಿರೀಕ್ಷಣೆಗೆ ಸುಮುಹೂರ್ತಂ ಕೇಳ್ದು

ಉರ್ವೀಶ್ವರನ ಪುರೋಹಿತ ಗಾಲವಂಗೆ, ತನ
ಗುರ್ವ ಬಾಂಧವ-ಪುತ್ರ-ಮಿತ್ರರ್ಗೆ, ನೆರೆದ ಭೂ-
ಗೀರ್ವಾಣರೆಲ್ಲರ್ಗೆ, ಕವಿ-ಗಮಕಿ-ನಟ-ವಿದೂಷಕ-ವಂದಿ-ಗಾಯಕರ್ಗೆ ॥
ಸರ್ವ ಜನಕರ್ಪರವರ ತರವರಿದು ಸತ್ಕರಿಸಿ,
ತರ್ವಾಯೊಳಗಣಿತ ದ್ರವ್ಯಮಂ ಪೊತ್ತು, ಬೀ
ಸರ್ವಿನಂ ಕೊಟ್ಟನುತ್ಸವದಿಂದ ಯಾಚಕರ್ಗಾ ದುಷ್ಟಬುದ್ಧಿಸೂನು ॥೨೦॥

ತದನಂತರದೊಳನಿಬರೆಲ್ಲರಂ ಕಳುಹಿ, ನಿಜ
ಸದನದಿ ಸಮಗ್ರ ವೈಭವದೊಳಿರಲಂದಿರುಳ್
ಮದನಂ ಸ್ವಬಾಂಧವರ್ವೆರಸಿ ದಂಪತಿಗಳಂ ಸಹಭೋಜನಂ ಮಾಡಿಸಿ ॥
ಇದನಂಗತಾತನಂ ಪೂಜಿಸಿದ ಫಲದೊಳಾ
ದುದನಂತ ಸೌಭಾಗ್ಯಮೆಂದು ಮುದದಿಂ ಪವಡಿ
ಸಿದನನ್ನೆಗಂ ಪೂರ್ವಶೈಲದಲಿ ಹೊಂಗಳಸದಂತೆ ಮಿಗೆ ರವಿ ಮೆರೆದನು॥೨೧॥

ಪಂಕರುಹಮಿತ್ರನುದಯದೊಳೆದ್ದು ಮದನಂ ಸ್ವ-
ಕಿಂಕರರ್ಗರುಪಲವರಂದಿನ ಮಹೋತ್ಸವಕ
ಲಂಕರಿಸಿದಧ್ವಜಪತಾಕೆಗಳ ರಚನೆಯಿಂದಮಲಮಣಿ ಮಂಟಪವನು ॥
ಕಂಕಣದ ಘನರವದ ಮಿಂಚುಗಂಗಳ ಸತೀ
ಸಂಕುಲದ ಮಾಳ್ಕೆಗಳ ಮಂಗಳಸ್ನಾನದಿಂ
ಕುಂಕುಮ ವಿಲಿಪ್ತಾಂಗನಾಗಿ ನಿಜ ವಧು ಸಹಿತ ಚಂದ್ರಹಾಸಂ ಮೆರೆದನು
॥ ೨೨ ॥

ಚಂಪಕಸ್ನೇಹಸಮ್ಮರ್ದನದ, ಕುಂಕುಮದ
ಕೆಂಪಿನನುಲೇಪನದ, ನಿರ್ಮಲ ಜಲಸ್ನಾನ
ದಿಂಪಿನ ಕಳೇವರದ, ರಂಜಿಸುವ ನೊಸಲ, ಮುತ್ತಿನ ಬಾಸಿಗದ ಚೆಲ್ವಿನ ॥
ದಂಪತಿಗಳೊಪ್ಪಿದರ್, ಪಾಡುವ ಪುರಂಧ್ರಿಯರ
ನುಂಪಿಡಿದ ಸ್ವರದಿಂದ ಮಂಗಳ ಸುವಾದ್ಯ ರವ–
ದಿಂ, ವಾರ್ವರಡಿಗಡಿಗಡರ್ಚುವ ಕೃತಸ್ವಸ್ತಿವಾಚನದ ಘೋಷದಿಂದ ॥೨೩॥

ಸುತ್ರಾಮ ತನಯ ಕೇಳ್, ಉತ್ಸವದೊಳೀಪರಿ ದಿ
ನತ್ರಯಂ ನಡೆಯಲ್ಕೆ, ನಾಲ್ಕನೆಯ ದಿವಸದೊಳ್
ಚಿತ್ರದಿಂ ವಿರಚಿಸಿ ಪೊಳಲ್ಬಗಿಸಿ, ನಾಗವಲ್ಲಿಯ ನೊಡರ್ಗಳನೊದವಿಸಿ ॥
ಕ್ಷತ್ರಿಯ ವಿವಾಹ ವೈಭವದೊಳಿದು ಪೊಸತೆನೆ ಧ
ರಿತ್ರಿಯೊಳ್, ಚಂದ್ರಹಾಸಂಗಾಯ್ತು ಮದುವೆ, ಶತ
ಪತ್ರನಾಭನ ಕಿಂಕರರ್ಗೆ ಮಾಡಿದಪಥ್ಯವದು ತಾನೆ ಪಥ್ಯವೆನಲು ॥೬೪॥

ವಿಸ್ತರಿಸಿ ಮೃಷ್ಟಭೋಜನದ, ನವ ಕುಸುಮ ಫಲ
ವಸ್ತುಗಳ, ಕಪ್ಪುರದ ವೀಳೆಯದ, ಚಂದನದ
ಕಸ್ತುರಿ ಜವಾದಿಗಳ ಪರಿಮಳದ, ಕರ್ದಮದ ವಸ್ತ್ರಭೂಷಣ, ವಿಸ್ತಾರ ॥
ಪ್ರಸ್ತುತದ ಸನ್ಮಾನದಿಂದ ಮನ್ನಿಸಿದಂ ಸ-
ಮಸ್ತ ಜನಮಂ, ಮದನನಾಪ್ತ ಬಂಧುಗಳಂ ಪ್ರ-
ಶಸ್ತ ಪೂಜೆಗಳಿಂದ ಸತ್ಕರಿಸಿ ಕೊಟ್ಟು, ನೆರವರ್ದಣಿಯೆ ತಾಂ ದಣಿಯುದೆ॥೬೫॥

ಬಂಡಾರದಖಿಳ ವಸ್ತುವನೊಂದು ತೃಣವಾಗಿ
ಕಂಡು ವೆಚ್ಚಿಸಿ, ಚಂದ್ರಹಾಸನ ವಿವಾಹಮಂ
ಕೊಂಡೆಸಗುತಿರ್ದನೊಲವಿಂ ಮದನನಿತ್ತ, ಕುಂತಳಪುರದೊಳವನತ್ತಲು ॥
ಭಂಡಲೆದು ಚಂದನಾವತಿಯೊಳ್ಕುಳಿಂದನಂ
ದಂಡಿಸಿದನಾ ದುಷ್ಟಬುದ್ಧಿ ಜರೆದುರೆ ಬೈದು,
ಹಿಂಡಿ, ಹಿಳಿದರ್ಥಮಂ ತೆಗದು, ಸೆರೆವನೆಗಿಕ್ಕಿ ನಿಗಳಮಂ ಕಾಲ್ಗೆ ಪೂಡಿ॥೬೬॥

ಹೆಕ್ಕಳಿಸಿ, ರಾಜ್ಯಮಂ ಕೊಟ್ಟಡೆನ್ನಂ ಮರೆದು,
ಸೊಕ್ಕಿ ತನಗೊರ್ವ ಮಗನಂ ಮಾಡಿಕೊಂಡವನ
ಮಕ್ಕಳಾಟಿಕೆಯಿಂದ ದೇವತಾಲಯ ತಟಾಕಾರಾಮ ಕೊಡವೆಗಳನು ॥
ಇಕ್ಕಿ, ಕೆಡಿಸಿದೆಯೆಂದವನ ವಳಿತಮಂ ತೆಗದು,
ಕಕ್ಕಸದ ಬಂಧನದೊಳಿರಿಸಿ, ಕುಂತಳನಗರಿ-
ಗಕ್ಕರಿಂದೈತಂದನಾ ದುಷ್ಟಬುದ್ಧಿ ವಾಹಕರನವಘಡಿಸಿ ನಡಸಿ ॥೬೭॥

ಕೊಂದಪನೊ ವಿಷವನೂಡಿಸಿ ಚಂದ್ರಹಾಸನಂ,
ಮಂದಮತಿಯಾಗಿ ಮರೆದಿರ್ದಪನೊ, ಮಗನೆಂಬ
ಸಂದೇಹದಿಂ, ಚಂದನಾವತಿಯೊಳಿರದೆ, ಕುಂತಳಪುರಕೆ ದುಷ್ಟಬುದ್ಧಿ ||
ನಿಂದಲ್ಲಿ ನಿಲ್ಲದೈತರೆ, ಪಥದೊಳಿದಿರಾಗಿ
ಬಂದು ನುಡಿದುದು ಸರ್ಪನೊಂದು ನಿನ್ನಾಲಯದೊ
ಳಿಂದುವರೆಗೊಡವೆಯಂ ಕಾದಿರ್ದನದು ತವ ತನುಜನಿಂದ ಪ್ರೇಮುದೆಂದು
||೨೮||

ಮಾನವರ ತೆರದೊಳಿಂತೆಂದೊರೆದು, ಫಣಿ ಬಿಲಕೆ
ತಾನಿಳಿಯೆ, ಕೇಳ್ದು, ವಿಸ್ಮಿತನಾಗಿ, ಮಂತ್ರಿ ದು-
ಮ್ಮಾನದಿಂ ನಗರದ ಸಮೀಪಕೈತರೆ ವಾದ್ಯಘೋಷಣಂ ಕಿವಿಯೊಳಿಡಿಯೆ ||
ಏನಿದುತ್ಸವಮೂರೊಳೆನೆ, ಕಂಡವರ್ ನಿನ್ನ
ಸೂನು ಮದನಂ ಚಂದ್ರಹಾಸಂಗೆ ವಿಷಯೆಗೆ ವಿ
ಧಾನದಿಂ ಮದುವೆಯಂ ಮಾಡಿಸಿದನದರೊಸಗೆ ಪೊಳಲೊಳಾದಪುದೆಂದರು
||೨೯||

ಕೂರ್ದಸಿಯನಿಳುಹಿದಂತಾಯ್ತು ಕರ್ಣದೊಳಾಗ,
ಕಾರ್ದುವಕ್ಷಿಗಳರುಣತೆಯನುಗ್ರ ಕೋಪದಿಂ,
ಮೀರ್ದನೇ ತನ್ನ ನೇಮವನಕಟ ಮಗನೆಂದು ವಲ್ಗಡಿಯುತ್ತೈತರಲ್ಕೆ ||
ನಾರ್ದು ಸಂತೋಷದಿಂ ಬಂದವಂ ಕಾಲ್ಗೆರಗೆ,
ಚೀರ್ದು, ಸುತನಂ ಬೈದು, ಮಂತ್ರಿ ನಿಜ ಸದನಮಂ
ನೇರ್ದು, ಪೊನ್ನಂದಣಮನಿಳಿದಾತ್ಮಜಾತನಂ ನೋಡಿ ಮುಳಿದಿಂತೆಂದನು
||೩೦||

ಮದನನಂ ಮದುವಕ್ಕಳಂ, ಮಹಾವೈಭವದ
ಮದುವೆಯಂ, ತ್ಯಾಗಭೋಗವನುಚಿತ ರಚಿತಮಂ,
ಮುಖದಿಂದ ಬಣ್ಣಿಸುವ ಭಟ್ಟರಂ, ಬಿತ್ತರಿಸಿ ವರಸುವ ಮಹೀಸುರರನು ||
ಸುದತಿ ವಿಷಯೆಗೆ ತಕ್ಕ ವರನಿಂದುಹಾಸನೆಂ–
ದಿದಿರಾಗಿ ಬಂದಾರತಿಯನೆತ್ತಿ ನುಡಿವ ಶಶಿ
ವದನೆಯರನವಘಡಿಸಿ ಮಂತ್ರಿ ಬೈದಂ ತನ್ನ ಮನೆಗಾಪ್ತರಾದವರನು ||೩೧||

ರಂಜಿಸುವ ಪೊಸಮುತ್ತಿನೆಸವ ಬಾಸಿಗದ ನೊಸ
ಲಿಂ, ಜಡಿವ ಮಣಿಭೂಷಣಾವಳಿಯ ಕಾಂತಿಯಿಂ,
ಮಂಜುಳ ಹರಿದ್ರ-ಕುಂಕುಮಚರ್ಚಿತಾಂಗದಿಂ, ಚೆಲ್ವಿಂದ ಬಂಗಡಿಸಿದ ॥
ಅಂಜುಳಿಗಳಿಂ, ಮೆರೆವ ದಂಪತಿಗಳಭಿನಮಿಸೆ,
ಮಂಜರಂ ಮೀರಿ ಗಿಳಿಗಳಂ ನಿರೀಕ್ಷಿಸುವಂತೆ,
ನಂಜಿಡಿದ ಮನದಮಾತ್ಯಂ ನೋಡಿ, ತನ್ನ ಸುತನಂ ಬಯ್ಯುತಿಂತೆಂದನು॥೩೨
ಮೂಢ ನೀನೆಲವೆಲವೊ ಮದನ, ನಿನ್ನೆಡೆಗೆ ನಾಂ
ಗೂಢದಿಂ ಬರಸಿ ಕಳುಹಿದೊಡುರುವ ಕಜ್ಜಮಂ
ರೂಢಿಯಂ ಮಾಡಿ ಕೆಡಿಸಿದೆ, ಪಾಪಿ, ಹೃದಯಶೂಲವನೆನಗೆ ಮೇದಿನಿ
ಯೊಳು ॥
ಗಾಢದಿಂ ಬಲಿದೆ, ಸಾಮ್ರಾಜ್ಯ ಸಿಂಹಾಸನಾ
ರೂಢನಾಗಿರಲೊಲ್ಲದಾರ್ಜಿಸಿದ ವಿತ್ತಮಂ
ವೇಡ್ಯೆಸಿದಖಿಳ ಜನಕಿತ್ತೆ, ವನವಾಸವೇ ಗತಿ ನಿನಗೆ ಹೋಗೆಂದನು ॥೩೩॥

ಪಿತನ ಮಾತಂ ಕೇಳ್ದು, ಮದನಸುರೆ ಬೆರಗಾಗಿ,
ಖತಿಯೇಕೆ ಜೀಯ, ನಿಮ್ಮಡಿಗಳ ನಿರೂಪಮಂ
ಪ್ರತಿಪಾಲಿಸಿದೆನಲ್ಲದಾನತಿಕ್ರಮಿಸಿ ಮಾಡಿದ ಕಜ್ಜಮೇನಿದರೊಳು ? ॥
ಕ್ಷಿತಿಗೆ ಕೌತುಕವೆ ! ತಂದೆಯ ಮಾತಿಗಾಗಿ ರಘು
ಪತಿ ವರ್ತಿಸನೆ ವಿಪಿನವಾಸದೊಳ್, ಪತ್ರ ನಂ
ಮತವಿಡಿದು ವಿಷಯೆಗೆ ವಿವಾಹಮಂ ವಿರಚಿಸಿದಡಾಯ್ತು ವನ ತನ-
ಗೆಂದನು ॥೩೪॥

ಗನ್ನಗತಕದ ಮಾತು ಸಾಕನ್ನ ಕಣ್ಣಮುಂ-
ದಿನ್ನಿರದೆ ಹೋಗೆಂದು ಮಂತ್ರಿ ಮಗನಂ ಬೈದು,
ಮುನ್ನ ತಾಂ ಬರಸಿ ಕಳುಹಿದ ಪತ್ರಮಂ ತರಿಸಿ ನೋಡಿಕೊಂಡದರೊಳಿರ್ದ॥
ಭಿನ್ನಿಸಿದ ಭಾವಾರ್ಥಮಂ ತಿಳಿದು, ತಪ್ಪಿಲ್ಲ
ವೆನ್ನ ತನಯನೊಳಿಂತು ಲೋಕದೊಳ್ ವಿಧಿಲಿಖಿತ-
ಮನ್ನಿವಾರಿಪರುಂಟೆ ? ಶಿವಶಿವಾ ! ಪೊಸತೆಂದು ಬಿನುಸುಯ್ದು ಬೆರಗಾದನು
॥೩೫॥

ವಿಷವೆ ಮೋಹಿಸುವಂತೆ ಕೊಡುವುದೆನಲೀತಂಗೆ
ವಿಷಯೆ ಮೋಹಿಸಲೆಂಬ ಲೇಖನದ ಬರಹ ತಾಂ
ವಿಷಮವಿದು, ವಿಧಿಕೃತವೊ! ತನ್ನ ಮೋಸವೊ! ಬರೆದವನ ಮರವೊ! ಶಶಿಹಾಸನ ॥
ನೃಪೆಯೊ! ಮದನನ ಮೇಲೆ ತಪ್ಪಿಲ್ಲ, ಮೊದಲೆನಗೆ
ರಿಷಿಗಳಾಡಿದ ಮಾತು ಪುಸಿಯದೆಂದಾ ಮಂತ್ರಿ,
ವಿಷಮಬುದ್ಧಿಯೊಳೊಂದುಪಾಯಮಂ ಮನದೊಳಗೆ ನೆನೆದು ಚಿಂತಿಸು-ತಿರ್ದನು ॥೩೬॥

ವಿಧುಹಾಸನಂ ಪಲವುಪಾಯದಿಂದೀಗ ನಾಂ
ವಧಿಸದಿರ್ದಡೆ, ತನ್ನ ಸಂತತಿಗೆ ಧರೆಯನಾ-
ಳ್ವಧಿಕ ಸಂಪದಮಾಗದದರಿಂದ, ಕುಲಘಾತಕಗೆ ಮದುವೆಯಾದ ವಿಷಯೆ ॥
ವಿಧವೆಯಾಗಿರಲೆಂದು ಹೃದಯದೊಳ್ ನಿಶ್ಚೈಸಿ,
ಮಧುರೋಕ್ತಿಯಿಂದ ಮದುಮಕ್ಕಳಂ ಮನ್ನಿಸಿ, ವಿ-
ವಿಧ ವೈಭವಂಗಳಂ ನಡಸಿ, ಜಾಮಾತನಂ ಮಂತ್ರಿ ಕರದಿಂತೆಂದನು ॥೩೭॥

ವೀರ ಬಾರೈ ಚಂದ್ರಹಾಸ, ನೀನಿನ್ನೆಗಂ
ದೂರಮಾಗಿರ್ದೆ, ನಮಗಿನ್ನಳಿಯನಾದ ಬಳಿ-
ಕೂರ ಹೊರ ವನದೊಳಿಹ ಚಂಡಿಕಾಲಯಕೆ, ಮದುವೆಯ ನಾಲ್ಕನೆಯ ದಿನದೊಳು ॥
ನೀರಜ ಸಖಾಸ್ತಸಮಯದೊಳೊರ್ವನೇ ಪೋಗಿ,
ಗೌರಿಯಂ ಪೂಜಿಸಿ ಬಹುದು ನಮ್ಮ ವಂಶದಾ
ಚಾರವಿದು ವರನಾದವಂಗೆ, ನೀನಿಂದಿದಂ ಮಾಡೆಂದು ನೇಮಿಸಿದನು ॥೩೮॥

ಲೇಸಾದುದೆಂದು ಮಾವನ ಮಾತಿಗೊಪ್ಪಿ, ಶಶಿ-
ಹಾಸಂ ಪ್ರಸೂನ ಗಂಧಾಕ್ಷತೆಗಳಂ ತರಿಸ-
ಲಾ ಸಚಿವನತಿ ಗೂಢದಿಂದ ಚಂಡಾಲರಂ ಕರಸಿ ನೀವಂದಿನಂತೆ ॥
ಮೋಸದಿಂ ಬಿಟ್ಟು ಬಾರದೆ, ಚಂಡಿಕಾಲಯಕೆ
ನೇಸರಂಬುಧಿಗಿಳಿಯಲರ್ಚನೆಗೆ ಬಹನೊರ್ವ-
ನೋಸರಿಸದಡಗಿಕೊಂಡಿರ್ದಾತನಂ ಕೊಲ್ವುದೆಂದು ಬೆಸಸಿದನವರ್ಗೆ ॥೩೯॥

ವಿಷಯ ಕೇಳಾ ಸಮಯದೊಳ್, ಕುಂತಳೇಶ್ವರಂ
ನಿಜ ಶರೀರಚ್ಛಾಯೆ ತಲೆಯಿಲ್ಲದಿರೆ ಕಂಡು,
ದ್ವಿಜಶಿರೋಮಣಿ ಗಾಲವಂಗರುಪಲಾತನಿದು ಮೃತಿಗೆ ಕಾರಣಮೆನಲ್ಕೆ ॥
ರುಜೆಗೆ ಮೈಗೊಡಬಾರದೇದು, ನಿರ್ವೋಕಮಂ
ಭುಜಗಪತಿ ಬಿಡುವಂತೆ, ಸಕಲ ಸೌಭಾಗ್ಯಮಂ
ತ್ಯಜಿಸಿ, ನಿರುಪಮಯೋಗಸಿದ್ಧಿಯಂ ಪಡೆಯೆ ವನವಾಸಕುದ್ಯೋಗಿಸಿದನು ॥೪೦॥

ಗಾಲವನ ಪದಕೆರಗಿ, ಕೈಮುಗಿದು ನಿಂದು, ಭೂ
ಪಾಲಕಂ ತನಗಿನ್ನು ನಾಕು ರಾಜ್ಯದ ಚಿಂತೆ,
ಕಾಲಮಂ ನಾಧಿನುವೆನತುಲಯೋಗದೊಳೆನಗೆ ಸುತರಿಲ್ಲ ಧರೆಯನಾರ್ಗೆ, ॥
ಬಾಲೆ ಚಂಪಕಮಾಲಿನಿಯನಾರ್ಗೆ ಕುಡುವೆಂ ? ವಿ
ಶಾಲಮತಿ ಬೆಸನೆಂದು ಬೇಡಿಕೊಳೆ, ಲಕ್ಷಣ ಸು
ಶೀಲನಹ ಚಂದ್ರಹಾಸಂಗೆ ಮೇದಿನಿ ಸಹಿತ ಮಗಳನಿತ್ತಪುದೆಂದನು ॥೪೧॥

ಎಂದಡರಸಂ ಗಾಲವನ ಬುದ್ಧಿಯಂ ಕೇಳ್ದು,
ತಂದೆ ಮಾಡುವ ರಾಜಕಾರ್ಯಮಂ ನಿರ್ವಹಿಸು
ತಂದು ಬಾಗಿಲೊಳಿರ್ದ ಮದನನಂ ಕರಸಿ, ಕೈವಿಡಿದು ಮೆಲ್ಲನೆ ಕಿವಿಯೊಳು॥
ಮುಂದೆ ನಮಗುರ್ವ ಕೆಲಸವ ಪೊರಿಗೆಯುಂಟು, ನೀ
ನಿಂದುಹಾಸನನಿಲ್ಲಿಗೀಗಳೊಡಗೊಂಡು ಬಾ,
ಸಂದೇಹಿಸದೆ ಪೋಗೆನಲ್ಕೆ, ಭೂಪಾಲನಂ ಬೀಳ್ಕೊಂಡು ಪೊರಮಟ್ಟನು॥೪೨॥

ಉತ್ತಮ ಹಯಾರೂಢನಾಗಿ, ಮದನಂ ಜವದೊ
ಳಿತ್ತಣಿಂದೈದೆ, ರವಿ ಪಶ್ಚಿಮಾಂಬುಧಿಗಿಳಿವ
ಪೊತ್ತು, ಪೊಂದಳಿಗೆಯೊಳ್ಪುಷ್ಪಫಲತಾಂಬೂಲಗಂಧಾಕ್ಷತೆಗಳನಿರಿಸಿ ||
ಎತ್ತಿಕೊಂಡತ್ತಣಿಂ ಬಹ ಚಂದ್ರಹಾಸನನಿ-
ದೆತ್ತ ಪೋದಪೆಯೆಂದು ಬೆಸಗೊಳಲ್ತವ ಪಿತಂ
ತತ್ತ ಸುವ್ರತಮೆನಲ್ಚಂಡಿಕಾ ಪೂಜೆಯಂ ಮಾಡಿ ಬಂದಪೆನೆಂದನು ॥೪೩॥

ತಟ್ಟನೆ ತುರಂಗಮವನಿಳಿದೆಲೆ ಮರುಳೆ, ಪಿತನ
ಕಟ್ಟಳೆಯ ಚಂಡಿಕಾ ಪೂಜೆಗಾಂ ಪೋದಪೆಂ,
ನೆಟ್ಟನೆ ಮಹೇಶ್ವರಂ ಪಿಡಿದು ಕಜ್ಜಕೆ ನಿನ್ನನೊಡಗೊಂಡು ಬಾಯೆನಲ್ಕೆ ॥
ಕಟ್ಟವಸರಕ ಬಂದೆನೆಂದರ್ಚನಾ ದ್ರವ್ಯ
ಮಿಟ್ಟ ಪೊಂದಳಿಗೆಯುಂ ತೆಗೆದುಕೊಂಡಶ್ವಮುಂ
ಕೊಟ್ಟಾತನಂ ಕಳುಹಿ, ಪೊರಮಟ್ಟನೇಕಾಕಿಯಾಗಿ ಮದನಂ ಪೊಳಲನು
॥೪೪॥

ತನ್ನ ಪಿತನಾಜ್ಞೆಯುಂ ನಡಸುವ ಕುಲವ್ರತವ
ನನ್ನಿ ಶಶಿಹಾಸಂಗೆ ಭಂಗವಾದಪುದೆಂದು
ಮನ್ನಿಸಿ, ನೆರೆದ ಸೇವಕರನೆಲ್ಲರಂ ಕಳುಹಿ, ಮದನನೇಕಾಕಿಯಾಗಿ ॥
ಉನ್ನತ ದ್ರುಮಷಂಡಮಂಡಿತದ ಬನದೊಳ್ಪ್ರ-
ಸನ್ನೆಯಾಗಿಹ ಚಂಡಿಕಾಲಯಕೆ ಬರುತಿರ್ದ
ನನ್ನೆಗಂ ಕರತಳದ ಗಂಧ ಪುಷ್ಪದ ಪಾತ್ರಮೋಸರಿಸೆ ಬಿದ್ದುದಿಳೆಗೆ ॥೪೫॥

ಚೀರುತ ಪೊಣರ್ದುವು ಬಿಡಾಲಂಗಳಕ್ಷಿಯಿಂ
ಕಾರಿದವು ರುಧಿರಮಂ, ಕೂಗಿದವು ಗೂಗೆಗಳ್,
ನಾರುತಿಹ ದುರ್ನಿಮಿತ್ತಂಗಳಂ ಕಂಡನಂ ವ್ರತಭಂಗಮಪ್ಪುದೆಂದು ॥
ಮೀರಿ ನಡೆಯುತ, ಮನದೊಳದರಿಂದ ಭೀತಿಗಳ್
ತೋರದಿರಲವನಿಯೊಳ್ ಚಂದ್ರಹಾಸಂಗೆನುತ
ಮೂರಂಬಕದೊಳೆಸವ ದೇವನರಸಿಯ ಭವನಕಾ ಮದನನೈತಂದನು ॥೪೬॥

ಖಳರಂತರಂಗಪ್ರವೇಶದ ವಿವೇಕಮಂ
ಬಳಸಿದರಿ-ಷಡ್ವರ್ಗಮೊತ್ತರಿಸಿ ಮುರಿವಂತೆ,
ಹೊಲಬರಿಯದೊಳಪೊಗುವ ಮದನನಂ, ಮಂತ್ರಿಕಳುಹಿದಡಲ್ಲಿ ಬಂದಡಗಿದ॥
ಕೊಲೆಗಡುಕ ಚಂಡಾಲರುಗಿದ ಕೈದುಗಳಿಂದ
ಕೆಲಬಲದೊಳಿರ್ದು ಪೊಯ್ದಿರಿದು ಕೆಡಹಿದಡೆ, ಭೂ-
ತಳಕೆ ಬೀಳುತ್ತವಂ ಮಾಧವಸ್ಮರಣೆಯಿಂದಸುದೊರೆದನಾ ಕ್ಷಣದೊಳು
॥೪೭॥

ಅವಘಡಿಸಿ ಮದನನಂ ಘಾತುಕರ್ ಚಂಡಿಕಾ
ಭವನದೊಳ್ ಕೊಂದು, ನಿಲ್ಲದೆ, ಪೋದರಿತ್ತಲು–
ತ್ಸವದಿಂದ ಚಂದ್ರಹಾಸಂ ಕುಂತಳೇಂದ್ರನಂ ಕಾಣಲಾ ನೃಪನವಂಗೆ ||
ಅವನಿಯಂ ಕೊಟ್ಟರಸು ಪಟ್ಟವಂ ಕಟ್ಟಿ, ಗಾ
ಲವನ ಮತದಿಂದ ಗಾಂಧರ್ವವೈವಾಹದಿಂ
ಕುವರಿ ಚಂಪಕಮಾಲಿನಿಯನಿತ್ತು, ಸತ್ಕರಿಸಿ, ಬನಕೆ ತಾಂ ಪೊರಮಟ್ಟನು
|| ೪೮ ||

ಬಾಧಿಸುವ ಸುಖದುಃಖಮೊಡಲೆನಿಪ ಸಂಸಾರ
ಸಾಧನವನೆಲ್ಲಮಂ ತೊರೆದು, ಸಮ್ಯಗ್ ಜ್ಞಾನ
ಬೋಧಿತದ ಯೋಗಮಂ ಕೈಕೊಂಡು, ಸತಿ ಸಹಿತ ಗಾಲವನನುಜ್ಞೆಯಿಂದ||
ಗೋಧೂಳಿ ಲಗ್ನದೊಳ್ ಪೊರಮಟ್ಟನಾ ಕುಂತ
ಳಾಧಿಪನರಣ್ಯವಾಸಕೆ, ಬಳಿಕ, ಚಂದ್ರಹಾ
ಸಾಧೀನವಾಯ್ತವನ ಸಂಪದಂ, ಪುರುಷಸ್ಯಭಾಗ್ಯಮೆಂಬುದು ನಿಜಮೆನೆ||೪೯||

ಪಟ್ಟದರಸಾಗಲ್ಕೆ ಚಂದ್ರಹಾಸಂ ಬಳಿಕ,
ಪಟ್ಟಣದ ಜನಮರಿಯಲೆಂದು, ಸಿಂಗರಿಸಿ ತೋ
ರ್ಪಟ್ಟ ಗಜಮಸ್ತಕದ ಮೇಲೆ ನೃಪಸುತೆ ಸಹಿತ ಪೊರಮಟ್ಟನುತ್ಸವದೊಳು ||
ದಟ್ಟಡಿದ ವಾದ್ಯರವಮೊದರಿತೀವಾರ್ತೆ ಕಿವಿ
ದಟ್ಟದಡೆ ದುಷ್ಟಬುದ್ಧಿಗೆ ಮತ್ತೆ ಭೀತಿ ಪೊ-
ಯ್ದಟ್ಟಿತೇನೆಂಬೆನಿದು ಪೊಸತಲಾ ! ದೈವಕೃತಮೆಂದು ನೈವೆರಗಾದನು||೫೦||

ಗಾಲವನ ಮತದೊಳೆನ್ನಂ ಕರಸದಿಂದು ಭೂ
ಪಾಲಂ ಕುಳಿಂದತನಯಂಗಿಳೆಯನೊಪ್ಪಿಸಿ, ವ
ನಾಲಯಕೆ ತೆರಳಿದನೆ! ಮದನನಿದ್ದೇಗೈದನೆಂದು ಪಲ್ಮೊರೆದು, ಮಗನ ||
ಮೇಲೆ ಕೋಪಿಸುತಿರ್ದನನ್ನೆಗಂ, ಭ್ರಮರಾರಿ
ಮಾಲಿನಿವೆರಸಿ ಮಾವನಂ ಕಾಣಲೆಂದು, ಶುಂ
ಡಾಲ ಮಸ್ತಕದಿಂದಮಿಳಿತಂದು ಶಶಿಹಾಸನೆರಗಿದಂ ಸಚಿವನಡಿಗೆ ||೫೧||

ಕಳವರಿವ ಕೋಪದಿಂ ಮಂತ್ರಿ ಮಂಶಾಚಾರ
ಮುಳಿಯಲಾಗದು ಚಂಡಿಕಾರ್ಚನೆಗೆ ನಡೆಯೆಂದು
ಕಳುಹಿದಡೆ, ನೀಂ ಮಾಡಿದುಜ್ಜುಗಮಿದೇನೆಂದು ಕೇಳ್ದಡಾ ಶಶಿಹಾಸನು ॥
ಅಳವಡಿಸಿಕೊಂಡು ನಾಂ ಪೋಗುತಿರೆ, ನಡುವೆ ಕುಂ
ತಳ ರಾಜನರಮನೆಗೆ ತನಗಪಸರವನಿತ್ತು
ತಳರ್ದನೆವರ್ಗನೆ ನಿಮ್ಮ ಮಗನಂಬಿಕಾ ಪೂಜೆಗಿಂತಾಯ್ತು ಬಳಿಕೆಂದನು
॥ ೫೧ ॥

ಹಮ್ಮೈಸಿದಂ ದುಷ್ಟಬುದ್ಧಿ ಮನದೊಳಗಳಿಯ
ನಮ್ಮನೆಗೆ ಬೀಳ್ಕೊಟ್ಟನರಿದರಿದು, ಪರಹಿಂಸೆ-
ಯಮ್ಮಾಡಿ ಮಾನವಂ ಬಾಳ್ದಪನೆ? ದೀಪಮಂ ಕೆಡಿಸುವ ಪತಂಗದಂತೆ ॥
ನಮ್ಮಪಾಯುವೆ ಸಮುಗವಾಯುಮಂ ತಂದುದೆಂ
ದೊಮ್ಮೆ ನಿಜ ಸದನಮಂ ಪೊಕ್ಕಾರುಮರಿಯದವೊ-
ಲುಮ್ಮಳಿಸಿ ಶೋಕದಿಂ ಪೊರಮಟ್ಟನೇರಿಳಿದು ಕೋಟೆಯಂ ಕತ್ತಲೆಯೊಳು
॥೫೨॥

ಮೊಂಟುವಗ್ಗದ ಶೋಕದಿಂದಿರದೆ ಪೊರಮಟ್ಟು,
ನಾಂಟುವೊತ್ತುವ ಮುಳ್ಮರಂಗಳಂ ಬಗೆಗೊಳದೆ,
ದೀಂಟೆಗುಳಿಗಳನರಿಯದೇಳುತ್ತ ಬೀಳುತ್ತ ತಲೆಗೆದರಿ ಬಾಯ್ಬಿಡುತ್ತ ॥
ಕೋಂಟೆಗಳನೇರಿಳಿದು, ಪರಿಘೆಯ ಜಲಂಗಳಂ
ದಾಂಟಿ, ಕತ್ತಲೆಯೊಳೊರ್ವನೆ ಮಂತ್ರಿ ಪೊಳಲ ಪೊರ
ದೊಂಟದೆಡೆಯೊಳ್ನಿಲಸಿದಂಬಿಕಾ ಭವನಮಂ ಸಾರ್ದನದನೇವೇಳ್ವೆನು॥೫೩॥

ಪರಿದ ಪೂಮಾಲೆಗಳ, ಬಣ್ಣ ಗೂಳ್ಗಳ, ಬಲಿಯ
ಮರದ, ಪಳಗೊಳ್ಳಿಗಳ, ಭಸ್ಮ ಮಾದೊಡಲುಗಳ,
ಮುರಿಮುರಿದ ಗೂಡುಗಳ, ಕಳಲ್ದ ಶಿಬಿಕೆಗಳ, ಚಿತಿಯೊಳ್ಬೇವ ಕುಣಪಂಗಳ॥
ತುರುಗಿದೆಲುಗಳ ಜಂಬುಕಾವಳಿಯ ಗೂಗೆಗಳ
ಬಿರುದನಿಯ ಭೂತವೇತಾಳ ಸಂಕುಲದಡಗಿ
ನರಕೆಗಳ ಸುಡುಗಾಡೊಳಾ ಮಂತ್ರಿ ಚಂಡಿಕಾಲಯದೆಡೆಗೆ ನಡೆತಂದನು|೫೪|

ತಂಡತಂಡದ ಭೂತ ವಿತತಿಗಳ್ ತಲೆಗೆದರಿ
ಕೊಂಡು, ಪೆರ್ಮರುಳಂತೆ ಬಹ ದುಷ್ಟಬುದ್ಧಿಯಂ
ಕಂಡು, ತಾವತಿಪಾತಕಂಗಳಂ ಮಾಡಿದ ಪಿಶಾಚರಗ್ಗಳಿಯರೆಮ್ಮ ॥
ಹಿಂಡೊಳಿವನಾವನೆಂದಾವಾವ ಪಾಪದು-
ದ್ದಂಡವೊ ಶಿವಶಿವಾ ! ಎನುತಲಾ ಪ್ರೇತಗಳ್
ಮಂಡಲಾಕೃತಿಯಾಗಿ ನೆರೆದು ನಿಶಿಯೊಳ್ ನಲಿಯುತಿರ್ದವಾತನ
ನೋಡುತೆ ॥೫೬॥

ನಾಕಶಾಸನತನಯ ಕೇಳ್ಬಳಿಕ ಮಂತ್ರಿಸುತ
ಶೋಕದಿಂದಲ್ಲಿಹ ಮರುಳ್ಗಳಂ ಕಾಣದವಿ-
ವೇಕದಿಂ ಬೇವ ಕುಣಪದ ಚಿತಿಯೊಳುರಿವ ಕಾಷ್ಠಂಗಳಂ ತೆಗೆದುಕೊಂಡು ॥
ಆ ಕಾಳಿಕಾಲಯಕೆ ಬಂದದರ ಬೆಳಕಿನೊ
ಳ್ವ್ಯಾಕೀರ್ಣ ಕೇಶದ ನಿಮಿರ್ದ ಕೈಕಾಲುಗಳ-
ನೇಕಾಯುಧದ ಗಾಯದೊಡಲ ರುಧಿರದ ಪೊನಲ ಸುಕುಮಾರನಂ ಕಂಡನು
॥೫೭॥

ಉನ್ನಿಸಿದ*ನಿಜ ಮನೋರಥ ಮುಡಿದೊರಗಿದಂತೆ
ತನ್ನ ಕುಲತರು ಮುರಿದು ಬಿದ್ದಂತೆ, ಸೌಭಾಗ್ಯ-
ದುನ್ನತ ಪ್ರಾಸಾದವೊರ್ಗುಡಿಸಿ ಕೆಡೆದಂತೆ, ಮುರಿದ ಮೊನೆಗಳ ಮೊಗದ ॥
ಬಿನ್ನಣದ ಬಿಟ್ಟ ಕಂಗಳ, ಬಿಗಿದ ಪುರ್ಬುಗಳ,
ಕೆನ್ನೀರೊಳದ್ದ ಕೇಶದ, ಶೋಣಿತಾಂಬರದ,
ಭಿನ್ನಮಾದವಯವದ ನಂದನಂ, ಕಾತ್ಯಾಯನಿಯ ಮುಂದೆ ಮಡಿದಿರ್ದನು
॥೫೮॥

ಕಯ್ಯೊಳಿಹ ಕಾಷ್ಠಂಗಳಂ ಬಿಸುಟು, ತನುಭವನ
ಮೆಯ್ಯ ಗಾಯಂಗಳಂ ತಡವಿ, ತಕ್ಕೈಸಿ, ಮಗು-
ಳೊಯ್ಯನೊಯ್ಯನೆ ಕುಳ್ಳಿರಿಸಿ, ಮೊಗಕೆ ಮೊಗವಿಟ್ಟು, ಚುಂಬಿಸಿ, ಕುಮಾರ
ನಿನ್ನ ॥
ಅಯ್ಯನಾಂ ಬಂದೆನೇಳ್ಕೈ ತಂದೆ, ನಾಡನಾ-
ರಯ್ಯ ಬೇಡವೆ ಕಂದ ? ಕುಂತಳಾಧೀಶನೇ
ಗೆಯ್ಯ ಹೇಳದನೆನಗೆ ವಿವರಿಸದೇ ಸುಮ್ಮನಿರ್ದಪೆಯೆಂದೊರಲ್ದನವನು॥೫೯॥

* ಉನ್ನತದ

ಬಂದನಿದೊ ಶಶಿಹಾಸನಸುಜೆಯುಂ ಕೂಡ., ವಿಪ್ರ
ವೃಂದವಂ ತಣಿಸು, ಬಹು ವಿಧದಿಂದ ನಾಂ ಪೈಪ
ನೆಂದು ಮುನಿದಿರಬೇಡ, ವೈಷ್ಣವ ದ್ರೋಹದಿಂದನಗಿಂತುಂಟಾಗದಿಹುದೆ ? ||
ಕಂದ ನೀನಚ್ಯುತ ಪರಾಯಣಂ, ಶಿವ ಪೂಜ-
ಕಂ, ದೇವ–ಗುರು ಧರಾಮರ ಸೇವಕಂ, ಪೋಸ
ಬಂದಳಿವುದುಚಿತವೇ ? ಮದನ, ಮನ್ಮರದಾನೆ ಕಾಯುವಳಲ್ಲನೆಂದು||೬೦||

ಮಿತ್ರಪ್ರಿಯುಂ, ರಾಜ ತೋಷಿತಂ, ಮಂಗಳ ಚ-
ರಿತ್ರಂ, ಬುಧಾಶ್ರಯುಂ, ಗುರುಭಾವಿ, ಕವಿ ನುತಂ,
ಚಿತ್ರಮಣಿ, ಮಂದರನಿಭಂ, ಭೋಗಿ, ಸಂತತಂ ಧ್ವಜವಜ್ರಶುಭಚರಣನು ||
ಪುತ್ರ ನಿನಗಪ್ಪುದು, ನವಗ್ರಹ ಸ್ಥಿತಿಗಳ್ಗೆ-
ರಿತ್ರಾಣಮಂ ಮಾಡಿದವರಿಲ್ಲ, ನಿನಗಾನೆ
ಶತ್ರುವಾದೆಂ, ಮಗನೆ, ಹಾಯೆಂದು ಹಲುಬಿದಂ ಮಂತ್ರಿ ಶೋಕಾರ್ತನಾಗಿ
||೬೧||

ಕಂಬನಿಗಳರುಣಾಂಬುವಂ ತೊಳೆಯೆ, ಮುಂಡಾಡಿ
ಹಂಬಲಿಸಿ ಹಲುಬಿದಂ, ಮರುಗಿ, ತನ್ನಿಂದಳಿದ-
ನೆಂಬಳಲ್ಕಿಗೆ, ಮಂತ್ರಿ ಸೈರಿಸದೆ, ಕೆಲಬಲದ ಕಂಬಂಗಳಂ ಹಾಯಲು ||
ಕುಂಬಳದ ಕಾಯಂತೆ ಚಿಪ್ಪಾಗಿ, ನಿಜ ಮಸ್ತ-
ಕಂ ಬಿರಿದು ಬಿದ್ದನುರ್ವಿಗೆ, ಪೋದುದಸು ಕಾಯ
ದಿಂ, ಬಳಿಕ, ನಂದಿದ ಸೊಡರ್ಗಳೆನೆ ಮೃತರಾಗಿ ಸುತ ತಾತವಿರುತಿರ್ದರು
||೬೨||

ಅರಿಯರಾರುಂ ಪುರದೊಳಿವರಿಲ್ಲಿ ಮಡಿದುದಂ,
ತುರುಗಿದ ತಮಂಧನೊಯ್ಯನೆ ಜಾರಿತಳಿಕುಲದ
ನೆರೆಬಿಟ್ಟುದಂಬುಜದೊಳೊಡನೆ ತಲೆದೋರಿದಂ ತರಣಿ ಮೂಡಣ ದೆಸೆ
ಯೊಳು ||
ಪೊರಮಟ್ಟ ಚಂಡಿಕಾಲಯಕೆ ಪೊಸಪೂಗಳಂ
ತಿರಿತಂದು, ಪೂಜಿಸುವ್ರೊಡೊಳಪೊಗುವ ತಾಪಸಂ
ಬಿರತು ಬಿದ್ದಿಹ ತಂದೆ ಮಕ್ಕಳಂ ಕಂಡು, ಹಮ್ಮೈಸಿ ವಿಸ್ಮಿತನಾದನು ||೬೩||

ಪಟ್ಟಣದೊಳಿರುಳೊಸಗೆ ಪಸರಿಸಿತು, ರಾಜ್ಯಮಂ
ಬಿಟ್ಟು ವನಕೈದಿದಂ ಕುಂತಳಾಧೀಶ್ವರಂ,
ಪಟ್ಟಮಾದುದು ಚಂದ್ರಹಾಸಂಗೆ, ಸೂನು ಸಹಿತೀ ದುಷ್ಟಬುದ್ಧಿಗಿಲ್ಲಿ ||
*ಕುಟ್ಟಿಕೆಡಹಿದರಾರೊ ? ಶಿವಶಿವಾದ್ಭುತಮೆನುತ
ನೆಟ್ಟಗೆ ನೃಪಾಲಯಕೆ ತಾಪಸಂ ಬಂದು ಮೊರೆ
ಯಿಟ್ಟಡೆ, ಕುಳಿಂದಜಂ ಕೇಳ್ದಿರದೆ ಪೊರಮಟ್ಟು ಕಾಳ್ಗಡೆಯೊಳೈತಂದನು ||೬೪||

ಚಂಡಿಕಾಲಯಕಖಿಳ ಜನ ಸಹಿತ ನಡೆತಂದು,
ದಿಂಡುಗೆಡೆದಿಹ ಮಾವ ಮೈದುನರ ಹಾನಿಯಂ
ಕಂಡು, ಕಡು ಶೋಕದಿಂದುರೆ ನೊಂದು, ಚಂದ್ರಹಾಸಂ ದೇವಿಯಂ ನೋಡುತ ||
ಖಂಡಿಸಿದೆಲಾ ತನ್ನ ಭಾಗ್ಯಮಂ, ತಪ್ಪಾವು
ದಂಡಲೆದು ಪಡೆವೆನಿವರಸುಗಳಂ ಮೀರಿದಡೆ,
ಪುಂಡರೀಕಾಂಬಕನ ಸಾಯುಜ್ಯಮೆನಗಾಗಲೆಂದು ನಿಶ್ಚಿತನಾದನು ||೬೫||

ರಭಸದಿಂದೈತಂದು ಗೋಳಿಡುವ ಬಂಧುಜನ-
ಕಭಯಮಂ ಕೊಟ್ಟು, ನಿಶ್ಚಲನಾಗಿ, ಶಶಿಹಾಸ-
ನಭವನರಸಿಯುಮುಂದೆ ಚತುರಶ್ರಮಡೊಳ್ಕುಂಡಮಂ ತೆಗಸಿ ಬಳಿಕದರೊಳು ||
ಅಭಿಶೋಭಿಪಪೊಲಗ್ನಿಯಂ ಪ್ರತಿಷ್ಠಿಸಿ, ವಿಪ್ರ
ಸಭೆ ಸಹಿತ ಕುಳ್ಳಿರ್ದು, ಬಲಿದೀಪ ಮುಂತಾದ
ವಿಭವಂಗಳಂ ಮಾಡಿ, ಗುಡ ಪಾಯಸಾಜ್ಯ ತಿಲಹೋಮಂಗಳಂ ಬೇಳ್ದನು ||೬೬||

ಹೇಳಲೇನೈ ಪಾರ್ಥ, ಚಂದ್ರಹಾಸಂ ಬಳಿಕ
ಬಾಳಿಂದ ನಿಜ ದೇಹಮಾಂಸಮಂ ಕೊಯ್ಕೊಯ್ದು
ಬೇಳಿ, ಪೂರ್ಣಾಹುತಿಗೆ ಶಿರವನರಿದಪೆನೆಂದು ಖಡ್ಗಮಂ ಗೋಣ್ಗೆ ಪೂಡಿ, ||
ಕಾಳಿ ನೀನಖಿಳ ಶಕ್ತಿಗಳ ರೂಪಂಗಳಂ
ತಾಳಿ, ಸರ್ವಾತ್ಮಕನ ಕೂಡಿ, ರಮಿಸುವೆಯಲಾ
ವ್ಯಾಳಶಾಯಿಗೆ ಸಮರ್ಪಿತಮಾಗಲೊಪ್ಪುಗೊಳ್ಳೆಂದರಿಯಲನುಗೈದನು ||೬೭||

* ಕೆಟ್ಟಿಣಿಸಿದವರಾರೊ

ಬಿಚ್ಚಿದಂತೆಸವ ಪೀರವನಿಳಿದು ರುದ್ರಾಣಿ
ಚೆಚ್ಚರದೊಳೈತಂದು ಕಯ್ಯ ಬಾಳಂ ಪಿಡಿದು,
ನಿಚ್ಚಟದ ಹರಿಭಕ್ತಿಗಾಂ ಪ್ರೀತಿಯಂ ತಳೆದೆನಾತ್ಮವಧೆ ಬೇಡ ನಿನಗೆ ॥
ಪೆಚ್ಚಿದ ಕುಮಂತ್ರಪಾಪದೊಳಳಿದನೀ ಮಂತ್ರಿ,
ಮೆಚ್ಚಿಸಿದನಸುವನಾತನ ಸುತಂ ನಿನಗಾಗಿ,
ಮೆಚ್ಚಿಸಿದೆ ನೀಂ ಮಗನೆ, ಒಯಕೆಯಂ ಪೇಳೆರಡು ವರವನಿತ್ತಪೆನೆಂದಳು
||೬೮||

ದೇವಿಯ ಪದಾಂಬುಜದೊಳೆರಗಿ ಕೈಮುಗಿದು, ನೀಂ
ದಾವಾವ ಜನ್ಮಜನ್ಮಾಂತರದೊಳೆನಗೆ ರಾ-
ಜೀವನಾಭನ ಭಕ್ತಿ ದೊರಕೊಳಲಿದೊಂದು, ಮಡಿದಿಹ ಮಂತ್ರಿ, ಮಂತ್ರಿ-
ಸುತನು ॥
ಜೀವಿಸಲಿದೊಂದೀಗಳಿಂತೆರಡು ವರಮಂ ಕೃ
ಪಾವಲೋಕನದೊಳಿತ್ತಪುದೆಂದು ಮತ್ತೆ ಚರ
ಣಾವನತನಾಗಲ್ಕೆ, ಪಿಡಿದೆತ್ತಿ, ಕ್ಷತಮಡಗೆ ಮೈದಡವುತಿಂತೆಂದಳು ||೬೯||

ಜಗದೊಳಾರಚ್ಯುತ ಪ್ರೀತಿಯಂ ಮಾಡುವರ್
ಮಗನೆ, ತನಗಿಷ್ಟನವರಾಬಾಲ್ಯದಿಂದ ನೀ
ನಗಧರಧ್ಯಾನಪರನಾಗಿರ್ಪೆ ನಿನ್ನ ಚರಿತವನೋದಿ ಕೇಳ್ವವರ್ಗೆ ॥
ಮಿಗೆ ವರ್ಧಿಪುದು ಮುಕುಂದಾಭಿರತಿ, ಮುಂದೆ ಕಲಿ
ಯುಗದೊಳೆನ್ನಾಜ್ಞೆಯಿದು, ಹರಿಭಕ್ತಿ ನಿನಗೆ ಬೆಳ
ವಿಗೆಯಾಗದಿರ್ದಪುದೆ ? ನಿನ್ನ ವಾಂಛಿತಕಿನ್ನು ಕಡೆಯುಂಟೆ ? ಪೇಳೆಂದಳು
॥೭೦॥

ಎಂದು ಕಾರುಣ್ಯದಿಂ ತಾನೊಮ್ಮೆ ಕಣ್ಮುಚ್ಚಿ
ನಿಂದು ಜಾನಿಸಲಾಗ, ತಲೆದೋರಿತಾಕ್ಷಣದೊ-
ಳೊಂದು ವೈಷ್ಣವಶಕ್ತಿ ಬಳಸಿದಾಯುಧಜಾಲದಿಂದದಂ ಕೊಟ್ಟು ಬಳಿಕ ॥
ಇಂದುಹಾಸನ ಮಸ್ತಕದ ಮೇಲೆ ನಿಜ ಕರವ
ನೊಂದಿಸಿ, ತದೀಯ ಮಂತ್ರೋಪದೇಶಂ ಗೈದ
ಳಂದು ಕರ್ಣದೊಳಾತನ ಪ್ರೀತೆ, ಗಿರಿಜಾತೆ. ಲೋಕವಿಖ್ಯಾತೆ, ಮಾತೆ ॥೭೧॥

ತಾಯೆ, ಪಾರ್ವತಿ, ಪರಮ ಕಲ್ಯಾಣಿ, ಶಂಕರ
ಪ್ರಿಯೆ. ಸರ್ವೇಶ್ವರಿ, ಜಗನ್ಮಾತೆ, ಸನ್ನುತ
ಚ್ಛಾಯೆ. ಸಾವಿತ್ರಿ, ಶಾರದೆ, ಸಕಲ ಶಕ್ತಿರೂಪಿಣಿ, ಕಾಳಿ, ಕಾತ್ಯಾಯಿನಿ. ॥
ಶ್ರೀಯೆ. ವೈಷ್ಣವಿ, ವರದೆ, ಚಂಡಿ, ಚಾಮುಂಡಿ. ನಿರ
ಪಾಯೆ. ನಿಗಮಾಗಮಾರ್ಚಿತೆ, ಮಂತ್ರಮಯಿ. ಮಹಾ
ಮಾಯೆ ರಕ್ಷಿಪುದೆಂದು ಕೈಮುಗಿದು ಚಂದ್ರಹಾಸಂ ಬೇಡಿಕೊಳುತಿರ್ದನು ॥೧೨॥

ಹರಿಯುವಕ್ಷಸ್ಥಳ ವನಜನ ವದನಾಬ್ಜಮಂ
ಗಿರಿಶನ ಕಳೇಬರಾರ್ಧವನಿಂಬುಗೊಂಡೆಸವ
ಪರಮ ಕಲ್ಯಾಣಿ, ಕಾಲತ್ರಯದುಪಾಸ್ತಿಗಧಿದೇವಿ, ಗಾಯತ್ರಿ. ವರದೆ. ॥
ಗರುಡವಾಹಿನಿ, ಹಂಸಗಮನೆ, ವೃಷಭಾರೂಢೆ.
ನಿರುಪಮ ಫಲಪ್ರದಾಯಿನಿ, ಪುಣ್ಯಮಯಿ, ಸಕಲ
ದುರಿತಹರೆಯೆನ್ನನುದ್ಧರಿಸೆಂದು ಚಂದ್ರಹಾಸಂ ಬೇಡಿಕೊಳುತಿರ್ದನು ॥೧೩॥

ಮೊಳಗಿದವು ದೇವದುಂದುಭಿಗಳಂದಲ್ಲಿ ಪೂ-
ಮಳೆಗರೆದರಭ್ರದೊಳ್ ಕೊಂಡಾಡುತಮರ ತತಿ,
ಬಳಿಕ ಶಾಂಭವಿ ಮಾಯವಾದಳನು ಪಸರಿಸಿತು ಮದನ ಮಂತ್ರಿಗಳೊಡ-
ಲೊಳು ॥
ಬಲ ರೂಪ ಕಾಂತಿಗಳ್ಮುನ್ನಿನಂದದೊಳೆಸೆಯೆ.
ಮಲಗಿದವರೇಳ್ವಂತೆ ಕಣ್ದೆರೆದು ಕುಳ್ಳಿದರ್
ಒಲವಿನಿಂ ಚಂದ್ರಹಾಸಂ ಮಾವನಡಿಗೆ ಮಣಿದಪ್ಪಿದಂ ಮೈದುನನನು ॥೧೪॥

ಭೂವಲಯಕಿದು ಪೊಸತು, ಮರಣವಾದರೆ ಮತ್ತೆ
ಜೀವಮಂ ಬರಿಸಿದವರುಂಟೆ ? ನಿನ್ನವೊಲೆಂದು
ಕೈವಾರಿಸುವ ನಿಖಿಳ ಪೌರಜನ ಪರಿಜನಕೆ ಚಂದ್ರಹಾಸಂ ಮುದದೊಳು ॥
ಕಾವರಾರ್, ಕೊಲ್ವರಾರ್, ಅಳಿವರಾರ್, ಉಳಿವರಾರ್.
ಭಾವಿಪಡೆ ವಿಷ್ಣು*ಮಾಯಾಮಹಿಮೆಯಂದರಿದು
ನೀವೆಲ್ಲರುಂ ಕೃಷ್ಣಭಜನೆಗೈದಪುದೆಂದು ಸಾರಿದಂ ಬೇಡಿಕೊಂಡು ॥೧೫॥

* ಮಾಯಾಮಯಮಿದೆಂದರಿದು

ಇಮ್ಮಡಿಸಿತುತ್ಸವಂ ಬಳಿಕನಿಬರೆಲ್ಲರುಂ
ಸುಮ್ಮಾನದಿಂದ ನಗರಪ್ರವೇಶಂ ಗೈದ-
ರುಮ್ಮಳಿಸುತಿರ್ದಂ ಕುಳಿಂದಕಂ, ಪಾರ್ಥ ಕೇಳಾ ಚಂದನಾವತಿಯೊಳು ॥
ಸಮ್ಮತದೊಳಾತನಂ ಕರಸಿಕೊಂಡಾ ರಾಜ್ಯ-
ಮಂ ಮಹಾವಿಭವದಿಂ ಧರಿಸಿದಂ ಚಂದ್ರಹಾ-
ಸಮ್ಮುದಾನ್ವಿತನಾಗಿ ವಿಷಯೆ ಚಂಪಕಮಾಲಿನಿಯರ ಸಂಭೋಗದಿಂದ॥೭೬॥

ನಂದನಂ ಜನಿಸಿದಂ ಬಳಿಕ ವಿಷಯಾ ಗರ್ಭ
ದಿಂದ ಮಕರಧ್ವಜಾಖ್ಯಂ, ಕೂಡೆ ಸೌಭಾಗ್ಯ
ದಿಂದ ಚಂಪಕಮಾಲಿನಿಯ ಬಸಿರೊಳುದಿಸಿದಂ ಪದ್ಮಾಕ್ಷನೆಂಬ ಸೂನು, ||
ತಂದೆಗಿಮ್ಮಡಿ ಪರಾಕ್ರಮಿಗಳಾದರ್ಥರೆಯೊ-
ಳಿಂದುಹಾಸಂಗೆ ಸಮನಾದ ನೃಪರಿಲ್ಲಾದು-
ದಿಂದುವರೆಗಾತಂಗೆ ಮುನ್ನೂರು ವರುಷಮಿರ್ದಪನೀಗ ವೃದ್ಧನಾಗಿ ॥೭೭||

ಬುದ್ಧಿಪೂರ್ವಕಮಿಲ್ಲದಿಹ ಬಾಲಕಂಗೆ, ಪರಿ
ಶುದ್ಧ ಸಾಲಗ್ರಾಮಶಿಲೆಯ ಸಂಸರ್ಗದಿಂ-
ದುದ್ಧತದ ಸಾಮ್ರಾಜ್ಯಪದವಿ ಕೈಸಾರ್ದದೆನಲಿನ್ನು ಬೇಕೆಂದು ಬಯಸಿ ॥
ಶ್ರದ್ಧೆಯಿಂ ಪ್ರತಿದಿನದೊಳರ್ಚಿಸುವ ನರನಾವ
ಸಿದ್ಧಿಯಂ ಪಡೆಪನೊ ! ತನಗದರ ಪುಣ್ಯದಭಿ-
ವೃದ್ಧಿಯಂ ಬಣ್ಣಿಸುವಡರಿದೆಂದು ಫಲುಗುಣಂಗಾ ನಾರದಂ ಪೇಳ್ದನು॥೭೮॥

ಹರಿಯ ಸಾಲಗ್ರಾಮಶಿಲೆಯ ಮಹಿಮೆಗಳನಾ-
ಪರಿಂದ ವಿಸ್ತರಿಸಿ, ಚಂದ್ರಹಾಸನ ಪೂರ್ವ
ಚರಿತಮಂ ಪೇಳ್ದು, ವಂದನೆಗೊಂಡು,ದೇವಮುನಿ ಸರಿದನಂಬರಪಥದೊಳು||
ವರ ಭಾಗವತಶಿರೋಮಣಿಯ ದರ್ಶನದಿಂದ,
ಪರಮ ವೈಷ್ಣವ ಸಂಗತಿಯನಾಲಿಸಿದೆನೆಂದು,
ಸುರನಗರದೆರೆಯ ಲಕ್ಷ್ಮೀಪತಿಯ ಮೈದುನಂ ಪರಿತೋಷಮಂ ತಾಳ್ದನು
॥೭೯||



## ೩೨ ನೆಯ ಸಂಧಿ

**ವರ ಚಂದ್ರಹಾಸನಂ ಪ್ರೀತಿಯಿಂದೊಡಗೊಂಡು**
**ಶರನಿಧಿಯ ಮಧ್ಯದೊಳ್ ಬಕದಾಲ್ಭ್ಯನಂ ಕಂಡು**
**ತಿರುಗಿ ಕೃಷ್ಣಾರ್ಜುನರ್ ಸಿಂಧುದೇಶದ ಮೇಲೆ ಗಜನಗರಿ**
**ಗೈತಂದರು ॥**

ಕೇಳ್ದಿಲಾ ನರನಾಥ. ಪಾರ್ಥಂಗೆ ನಾರದಂ
ಪೇಳ್ದ ವೃತ್ತಾಂತಮಂ, ಬಳಿಕ ಸಂತೋಷಮಂ
ತಾಳ್ದು, ಕುಂತೀಸುತಂ ಚಂದ್ರಹಾಸನ ಪುರಕೆ ಮುಖವಾಗಿ ನಡೆಯುತಿರಲು।
ಆಳ್ದೋರಿ ತಮತಮಗೆ ಭೂಪಾಲರೈದೆ ಕೆಂ-
ಪೊಳ್ದೀವಲೋಕಮಂ ಕಿತ್ತೆತ್ತಿ ಕೊಂಡೊಯ್ಯ-
ಲಾಳ್ದುದಿನ್ನೇನಂಬುಧಿಯೊಳವನಿತಳಮೆಂಬ ತೆರನಾಗೆ ಪದಹತಿಯೊಳು ॥೧॥

ಬರುತಿರ್ದದರ್ಜುನನ ಸೈನಿಕಂ ಕುಂತಳ ನ-
ಗರಿಗಾಗಿ, ಜನಮೇಜಯಕ್ಷಿತಿಪ ಕೇಳ್, ಇತ್ತ
ನರನ ವಾಜಿಗಳೂರ ಪೊರವಳಯದುಪವನದ ನಡುವೆ ತಮ್ಮಿಚ್ಛೆಯಿಂದ ॥
ತಿರುಗುತಿರೆ, ಕಂಡವರ್ ಕೌತುಕಮಿದೆಂದು ಬಂ-
ದೊರೆಯ್ದು, ಪದ್ಮಾಕ್ಷ ಮಕರಧ್ವಜರ್ ಪಿಡಿದದರ
ಶಿರದ ಪಟ್ಟದ ಲಿಪಿಯನೋದಿ ವಿಸ್ಮಿತರಾಗಿ ತಂದೆಗೊಪ್ಪಿಸಿ ನುಡಿದರು ॥೨॥

ಜೀಯ ಬಿನ್ನಪವನವಧರಿಸಿಳೆಯ ಮೇಲೆ ಕೌಂ
ತೇಯನ ಮಹಾಧ್ವರದ ವಾಜಿಗಳ್ ತಿರುಗಿ, ತರು
ವಾಯೊಳಿಲ್ಲಿಗೆ ಬಂದಡಾವು ಕಟ್ಟಿದೆವಿನ್ನು ಬಿಡಿಸಿಕೊಂಬತಿಬಲರನು ||
ಸಾಯಕದ ಮೊನೆಯೊಳೈಸಲೆ ಕಾಣಬೇಕೆನಲ್
ಪ್ರೀಯದಿಂ ತನಯರಂ ತೆಗೆದಪ್ಪಿ, ತಾನಭಿ-
ಪ್ರಾಯಮಂ ತಿಳಿದು ಹರುಷಿತನಾಗಿ ಚಂದ್ರಹಾಸಂ ನಯದೊಳಿಂತೆಂದನು
||೩||

ಮಕ್ಕಳಿರ ಕೇಳಿ. ತಾನುಂ ಬಾಲ್ಯದಿಂದ ಬಿಡ-
ದಕ್ಕರಿಂ ಚಿತ್ತದೊಳ್ ಧ್ಯಾನಿಸುವ ದೇವನೆಂ-
ತಕ್ಕೆ ವೈದೋರುವಂ ಪಾರ್ಥನ ಸಹಾಯಕ್ಕೈತಂಮ ನಾವರಿಯೆವಲ್ಲ ||
ಸಿಕ್ಕಿದಡೆ ಕೃಷ್ಣ ದರುಶನದ ಪುಣ್ಯವೆ ಸಾಕು,
ಮಿಕ್ಕ ಸುಕೃತದ ಗಸಣಿಯೇಕಿನ್ನು ? ಧರ್ಮಾಧ್ವ
ರಕ್ಕೆ ತಿರುಗುವ ಕುದುರೆಗಳನಿಲ್ಲಿ ಕಟ್ಟಿವಡೆ ಪುರುಷಾರ್ಥಮೇನೆಂದನು? ||೪||

ಧರಣಿಯೊಳ್ ಪ್ರತ್ಯಕ್ಷ ಧರ್ಮವಾಕೃತಿ ಯುಧಿ
ಷ್ಠಿರ ಭೂಪನಾತನ ಹಯಂಗಳಂ ತಡೆದಪರೆ ?
ಪಿರಿದಾಯಸದೊಳವರ್ ಪಾಲಿಸಿದರಿನ್ನೆಗಂ ದಶ ಮಾಸದಿಂದ ಮೇಲೆ ||
ಅರೆದಿಂಗಳಾದುದಿನ್ನಿಹುದು ಪಕ್ಷತ್ರಯಂ
ವರುಷಕಲ್ಲಿಂದ ಮುಂದಿಲ್ಲಿ ಸಿಕ್ಕಿರ್ದಡ-
ಧ್ವರಮುಳಿವುದದರಿಂದ ನೀವೆ ರಕ್ಷಿಸಿ ಪಾಂಡವಂಗೆ ಕೊಟ್ಟಪುದೆಂದನು ||೫||

ತನ್ನ ಹೇಳಿಕೆಯೊಳಲ್ಲದೆ, ಕೃಷ್ಣ ಫಲುಗುಣ
ರ್ಗಿನ್ನು ಸಿಕ್ಕಿದ ಹರಿಗಳಂ ಬಿಡದೆ, ಭೂಮಿಯೊಳ್
ಸನ್ನದ್ಧರಾಗಿ ಪಾಲಿಸಿ ನೀವು ಯಜ್ಞಕಾಲಕೆ ಧರ್ಮಜಂಗೆ ಕೊಡಲು ||
ಉನ್ನತದ ಸುಕೃತಮಾದಪುದು ನಮಗೆಂದು, ಸಂ
ಪನ್ನಮತಿ ಚಂದ್ರಹಾಸಂ ನಿಜ ಕುಮಾರರಂ
ಮನ್ನಿಸಿ, ತುರಂಗರಕ್ಷೆಗೆ ಕಳುಹಿ ಪಡೆವೆರಸಿ ಪೊಳಲ ಪೊರಗಿರುತಿರ್ದನು ||೬||

ತುರಗಂಗಳಂ ಬಿಟ್ಟದರ ಕೂಡೆ ಸೇನೆ ಸಹಿ
ತಿರದೆ ಪದ್ಮಾಕ್ಷ ಮಕರಧ್ವಜರ್ ಪೋದ ಬಳಿ-
ಕರವಿಂದನಾಭ ದರ್ಶನಕೆ ಲೋಲುಪನಾಗಿ ಚಂದ್ರಹಾಸಂ ಮುದದೊಳು ॥
ಪುರದ ಹೊರವಳಯದೊಳ್ ಸೇನೆಯುಂ ಕೂಡಿ ಕೊಂ-
ಡಿರುತಿರ್ದನನ್ನೆಗಂ ಮೇರೆದಪ್ಪಿದ ಮಹಾ
ಶರಧಿಯಂತರ್ಜುನನ ಮೋಹರಂ ತಲೆದೋರಿತೆತ್ತಣದ್ಭುತಮಿದೆನಲು ॥೭॥

ಸಮತಳಿಸಿ ಫಲುಗುಣನ ಸೇನೆ ಬಹುದಂ ಕಂಡು,
ಸಮರಕಭಿಮುಖನಾಗಿ ತನ್ನ ಮೋಹರ ಸಹಿತ-
ಸಮ ಚಂದ್ರಹಾಸನೈತರಲಾಗ ಮುರಹರಂ ಸಕಲ ಭೂಪಾಲಕರನು ||
ಕ್ರಮದಿಂದ ನಿಲಿಸಿ, ಪಾರ್ಥಂಗೆ ಸಾರಥಿಯಾಗಿ,
ಕಮಲ ಸುಗದಾ ಶಂಖ ಚಕ್ರದ ಚತುರ್ಭುಜದ
ಕಮನೀಯ ರೂಪಮಂ ಕೈಕೊಂಡು ಬಿಟ್ಟನಾತನ ಸಮ್ಮುಖಕೆ ರಥವನು ॥೮॥

ನೋಡಿದೈ ಪಾರ್ಥ ವೈಷ್ಣವ ಶಿರೋಮಣಿಯನೆನೆ,
ಮೂಡಿ ಮುಳುಗುವ ಮಾಧವಧ್ಯಾನ ಚೇತನದ
ಸೂಡಿದ ಮುಕುಂದ ಪಾದಾಬ್ಜ ತುಳಸೀಪೂತ ಮಸ್ತಕದ ಸತ್ತ್ವಗುಣದ ॥
ಬೀಡೆನಿಪ ಕಲಿ ಚಂದ್ರಹಾಸನಂ ಕಂಡು, ತಾಂ
ಮಾಡಿದಗ್ಗದ ಪುಣ್ಯದಿಂ ಜನ್ಮ ಸಫಲವಾ-
ಯ್ತಾಡಲೇನನೆ ದೇವ, ತನ್ನ ಬಿನ್ನಪವನವಧರಿಸೆಂದನಿಂದ್ರಸೂನು ||೯||

ಜ್ಞಾನವೃದ್ಧಂ, ತಪೋವೃದ್ಧಂ, ವಯೋವೃದ್ಧ
ನೀ ನರೇಶ್ವರನೀತನಂ ಕಾದಿ ಜಯಿಸುವ ವಿ-
ಧಾನವೆಂತನಗೆ ಪೆಸನೆಂದರ್ಜುನಂ ಕೇಳ್ದಡಸುರಾರಿ ಕರುಣದಿಂದ ॥
ಧ್ಯಾನಿಸುವನಾಬಾಲ್ಯದಿಂದೆನ್ನನೀತಂಗೆ
ತಾನೊಲಿದೆನೆಂದು ನಿಜ ರೂಪಮಂ ತೋರಲಾ
ಭೂನಾಥನಂಬುಜಾಕ್ಷನ ದಿವ್ಯಮೂರ್ತಿಯಂ ಕಂಡು ಪುಳಕಿತನಾದನು॥೧೦॥

ಕಂಬು ಚಕ್ರಾಬ್ಜ ಕೌಮೋದಕಿಗಳಂ ಧರಿಸಿ,
ಪೊಂಬಟ್ಟೆಯಂ ತಾಳ್ದು, ಕೌಸ್ತುಭದ ಶೋಭಾವ
ಲಂಬದಿಂ ಸರ್ವಾಭರಣ ವಿಭೂಷಿತನಾಗಿ, ದಿವ್ಯಮಾಲೆಗಳನಾಂತು ॥
ತುಂಬಿದವಯವದ ಲಾವಣ್ಯಲಹರಿಗಳ ವಿಸ-
ಟಂಬರಿವ ಕರುಣರಸದೆಳನಗೆಯ ಸಿರಿಮೊಗದ
ಶಂಬರಾರಿಯ ಪಿತಂ, ಪಾರ್ಥನ ರಥಾಗ್ರದೊಳ್ಕಣ್ಗೆಸದನಾ ನೃಪತಿಯು॥೧೧॥

ಕಂಗಳ ನಿರೀಕ್ಷಣದ ಸೌಖ್ಯಮಂ ಸೂಸುವುದ-
ಕಂಗಳ ಪೊನಲ್ತುಡೆಯೆ, ಹರುಷದಿಂದೇಳ್ವ ಪುಳ-
ಕಂಗಳನೆಗಳ್ಕೆಯಿಂ ಭಯಭರಿತ ಭಕ್ತಿಯಿಂ ಬಾಗಿ ರಥವಿಳಿದು ಬಂದು ||
ಮಂಗಳ ಪವಿತ್ರ ಕೋಮಲ ಪಾದಪದ್ಮಯುಗ
ಳಂಗಳ ಸಮೀಪದೊಳ್ ಚಂದ್ರಹಾಸಂ ಪ್ರಣಾ-
ಮಂಗಳ ವಿಧಾನಮಂ ಮಾಡುತಿರೆ, ಹರಿ ತೆಗೆದು ಬಿಗಿಯಪ್ಪಿದಂ ಕೃಪೆ
ಯೊಳು ||೧೨||

ಅಸುರಾರಿ ಬಳಿಕರ್ಜುನನ ವದನಮಂ ನೋಡಿ,
ನಸುನಗುತ, ನುಡಿದನೇತಕೆ ಸುಮ್ಮನಿಹೆ ? ಧರ್ಮಿ
ಶಶಿಹಾಸನತಿಬಲಂ, ಪರಿಣತಂ, ಧ್ರುವಸನ್ನಿಭಂ, ತನಗೆ ಭಕ್ತನಿವನು ॥
ಒಸೆದು ನೀನಾಲಿಂಗಿಸೆನೆ, ದೇವ ನಿಮ್ಮಡಿಗ-
ಳುಸಿರುದುವಲಾ ತನ್ನ ಮಾರ್ಗಗತಿ ಲೇಸನ್ಯ-
ರೆಸಗುವಂದದೊಳಾಚರಿಸೆ ಭಯಾವಹಮೆಂದು ಭೀಷ್ಮಸಂಗರದೊಳೆನಗೆ
॥ ೧೩ ॥

ಅದರಿಂದ ಕಾಳಗವೆ ತನಗೆ ಕರ್ತವ್ಯಮೀ
ಪದದೊಳಾಲಿಂಗನಮುಚಿತಮಲ್ಲ, ವೃದ್ಧನಹ-
ನದರಿಂದ ಬೇಕಾದಡೀತಂಗೆ ವಂದಿಸುವೆನೆನೆ, ತನ್ನ ಕಿಂಕರರ್ಗೆ ||
ಮುದದೊಳೆರಗಿದಡೆ, ಮೇಣವರನಪ್ಪಿದಡೆ ತ-
ಪ್ಪದು ಮಾನವರ್ಗೆ ಕಪಿಲಾಗೋಸಹಸ್ರ ದಾ-
ನದ ಪುಣ್ಯಮೆನ್ನ ಭಕ್ತರನಾದರಿಪುದಧರ್ಮವೆ? ಪಾರ್ಥ ಹೇಳೆಂದನು ॥೧೪॥

ತನ್ನ ಶರಣರ ಜೀವನವೆ ತನಗೆ ಜೀವನಂ,
ತನ್ನ ಶರಣರ್ ಬೇರೆ ತಿಳಿಯೆ ತಾಂ ಬೇರಲ್ಲ,
ತನ್ನ ಶರಣರ ಹೃದಯಕಮಲದೊಳ್ ಪ್ರತ್ಯಕ್ಷಮಾಗಿ ತಾನಿರುತಿರ್ಪನು ||
ನಿನ್ನ ತೆರದಲಿ ಮರುಳರಾರುಂಟು ಲೋಕದೊಳ್ ?
ನಿನ್ನ ತೆರದಿಂದೀತನೆನಗೆ ಬೇಕಾದವಂ
ನಿನ್ನ ತೆರನೇನೆಂದು ಜರಿದು ಕೌಂತೇಯನಂ ಕೇಳ್ದನಸುರಾರಿ ನಗುತ ||೧೫||

ಭೂಪಾಲ ಕೇಳ್, ಬಳಿಕ, ಫಲುಗುಣಂ ಕೃಷ್ಣನ ನಿ-
ರೂಪಮಂ ಕೈಕೊಂಡು ಹರುಷದಿಂದಾಗ ನಿ-
ಷ್ಪಾಪನಾಗಿಹ ಚಂದ್ರಹಾಸನಂ ಬಂದು ಗಾಢಾಲಿಂಗನಂ ಗೈಯಲು, ||
ಆ ಪೊಡವಿಪತಿ ನುಡಿದನೆಲೆ ಪಾರ್ಥ, ಕದನದಾ-
ಳಾಪಮಂ ನಿನ್ನೊಡನೆ ಮಾಡಿದಡೆ, ನೃಪ ಮಖಂ
ಲೋಪಮಹುದೆಂದು ಕಳುಹಿದೆನೆನ್ನ ತನುಜರಂ ತುರಗ ರಕ್ಷಾರ್ಥಮಾಗಿ
|| ೧೬ ||

ಹಲವು ಮಾತುಗಳೇಕೆ, ನಮಗೆ ನಿಮಗಾಶ್ರಯಂ
ಜಲಜಾಕ್ಷನಾಗಿರ್ದ ಬಳಿಕಾವ ಧರ್ಮ ಕೌ
ಶಲಮಕಟ ! ನಾಕಿನ್ನು, ಪಾರ್ಥ, ನಿನ್ನಶ್ವಂಗಳಂ ತರಿಸಿಕೊಡುವೆನೆನುತ ||
ಬಲಸಹಿತ ಕುದುರೆಗಾವಲ್ಗೆ ಪೋಗಿಹ ಸುತರ
ಬಳಿಗೆ ಚರರಂ ಕಳುಹಿ, ಕರಸಲವರೈತಂದು
ಫಲುಗುಣನ ವಾಜಿಗಳನೊಪ್ಪಿಸಿ, ಮುರಾರಿಯುಂ ಕಂಡರತಿಭಕ್ತಿಯಿಂದ||೧೭||

ನರನೊಡನೆ ಸಖ್ಯಮಾದುದು, ಬಳಿಕ, ಬಂದ ನೃಪ-
ವರರೆಲ್ಲರಂ ಪ್ರಿಯದೊಳಾದರಿಸಿದಂ ಕೂಡೆ
ಹರಿಯನತಿಭಕ್ತಿಯಿಂದೈದೆ ಕೊಂಡಾಡಿದಂ ನಿರುಪಮಸ್ತುತಿಗಳಿಂದ ||
ಪರಿಪರಿಯ ಗುಡಿತೋರಣಾವಳಿಯ ರಚನೆ ಮಿಗೆ,
ಪುರಕೆ ಬಿಜಯಂಗೈಸಿ ತಂದನುತ್ಸವದಿಂದ
ಸಿರಿಯನುರೆ ವಿಸ್ತರಿಸಿ, ಭೂಪುರಂದರನಂತೆ ಚಂದ್ರಹಾಸಂ ಮೆರೆದನು ||೧೮||

ಇಂದುಹಾಸಾಶ್ರಯದೊಳಿರ್ದಖಿಳ ಪುರಜನಂ
ಕಂದರ್ಪತಾತನಂ ಕಂಡು, ಕೃತಕೃತ್ಯನಾ
ಯ್ತಿಂದಿರಾ ವಲ್ಲಭನ ಸಂದರ್ಶನಕೆ ದುಷ್ಟಬುದ್ಧಿ ನಿಜಸೂನು ಸಹಿತ ||
ಬಂದು ನಿರ್ಧೂತಕಿಲ್ಬಿಷನಾಗಿ, ಸಾದರದೊ
ಳಂದು ಗಾಲವನಸುರಮರ್ದನನ ಪಾದಾರ
ವಿಂದಮಂ ವಿವಿಧಾಗಮೋಕ್ತದಿಂ ಪೂಜಿಸಿದನತಿ ಭಕ್ತಿಭಾವದಿಂದ ||೧೯||

ಪ್ರೀತಿಯಿಂ ಚಂದ್ರಹಾಸಂ ತನ್ನ ರಾಜ್ಯಮಂ
ಪೀತಾಂಬರನ ಚರಣಸರಸಿರುಹಕರ್ಪಿಸಿದ
ನಾತಂ ಧನಂಜಯನ ಸಮ್ಮತದೊಳೊನೆದು ವಿಷಯಾಕುಮಾರಂಗೆ ಕೊಟ್ಟು॥
ಖ್ಯಾತಮಾದಖಿಳ ವಸ್ತುಗಳೊಡನೆ ಗಜಪುರಕೆ
ದೂತರಂ ಕಳುಹಿ, ಸತ್ಕೃತನಾಗಿ ಭೂಪತಿ
ವ್ರಾತ ಸಹಿತಲ್ಲಿ ಮೂರಿರುಳಿರ್ದು, ಪೊರಮಟ್ಟನೈದೆ ಕುದುರೆಗಳ ಕೂಡೆ॥೨೦॥

ಮುಪ್ಪಾದೆನೆಲೆ ಮಗನೆ, ಕೃಷ್ಣದರ್ಶನದಿಂದ
ತಪ್ಪದೆನಗಿನ್ನು ಮೋಕ್ಷದಲಾಭಮಸುರಾರಿ
ಗೊಪ್ಪಿಸುವೆನೀ ತನುವನಿವರಧ್ವರಂ ಮುಗಿದ ಬಳಿಕ ವನಕಾಂ ಪೋಪೆನು ॥
ಒಪ್ಪುದಿಲ್ಲದರಿಂದ ನಗರಕರಸಾಗಿ ಸುಖ-
ಮಿಪ್ಪುದೆಂದಿರಿಸಿ ನಿಜ ತನಯರಂ, ಶರಧಿಗೆಣೆ
ಯಪ್ಪ ಸೈನಿಕದೊಡನೆ ಪೊರಮಟ್ಟನಾ ಚಂದ್ರಹಾಸನರ್ಜುನನ ಕೂಡೆ॥೨೧॥

ಪುತ್ರ ಸಂಪದಮಾಯುರಾರೋಗ್ಯಮರಿವು ಶತ
ಪತ್ರನಾಭನ ಭಕ್ತಿ ದೃಢವಾಗಲೀತನ ಚ-
ರಿತ್ರಮಂ ಕೇಳ್ದವರ್ಗೆಂದು ಹರಿ ವರವನಿತ್ತಾತನಂ ಕೂಡಿಕೊಂಡು ||
ಸುತ್ರಾಮಸುತನ ಕುದುರೆಗಳೊಡನೆ ತೆರಳ್ದಂ ಧ-
ರಿತ್ರಿಯೊಳ್ದೇಶ ದೇಶದೊಳಿರ್ಪ ಭುಜಬಲ
ಕ್ಷತ್ರಿಯೋತ್ತಮರಂಜಿ ತುರಗಂಗಳಂ ತಡೆಯದಭಿನಮಿಸಿ ಬಿಡು
ತಿರ್ದರು || ೨೨ ||

# ಶಬ್ದಕೋಶ

ಅಂಕಿತ ಗುರುತು, ಎಣಿಕೆ
ಅಂಚೆ ಹಂಸ
ಅಂಜನ ಕಾಡಿಗೆ
ಅಂಜುಳಿ ಬೊಗಸೆ
ಅಂತಸ್ಥ ಅಂತರಂಗ
ಅಂಬರ ವಸ್ತ್ರ
ಅಗ್ಗಳಿಕೆ ಶೌರ್ಯ
ಅಚ್ಚರಿಗ ಆಶ್ಚರ್ಯ
ಅಡಸು ಕೂಡಿಕೊಳ್ಳು
ಅರ್ಣವ ಸಮುದ್ರ
ಅಣೆ ಮುಟ್ಟು, ಸ್ಪರ್ಶಿಸು
ಅಣ್ಣೆ, ಕಲ್ಲೊಡ್ಡಿ ಆಟದ ಹೆಸರುಗಳು
ಅಧಟ ಬಂಟ, ವೀರ
ಅಧ್ವ ಮಾರ್ಗ, ದಾರಿ
ಅನಿಲಜವ ವಾಯುವೇಗ
ಅಪರದಿಗ್ಭಾಗ ಪಡುವಣ, ಪಶ್ಚಿಮ
ಅಪಹೃತ ಜಯಿಸಲ್ಪಟ್ಟ
ಅರ್ಭಕ ಕೂಸು, ಶಿಶು
ಅಭ್ಯಗ್ರ ಜಾಗ್ರತೆ, ತ್ವರೆ
ಅಮೃತಾರ್ಚಿ ಚಂದ್ರ
ಅಮ್ಮದೆ ಶಕ್ತಳಾಗದೆ
ಅಮಿತ ಲೆಕ್ಕವಿಲ್ಲದ
ಅರಕೆಗೆಯ್ ಹುಡುಕು
ಅರಿಷ್ಟಾಂಶ ಕೊನೆಯ ಚರಣ
ಅಲತಿಕೆ ಅಲತಿಗೆಯ ರಸ
ಅವಗಡಿಸು ಆಕ್ರಮಿಸು
ಅಶ್ಮ ಕಲ್ಲು
ಅಸಿಯ ತೆಳ್ಳನ್ನ
ಅಹಿ ಹಾವು
ಅಹಿತರು ಶತ್ರುಗಳು
ಅಳ್ತಿ ಪ್ರೀತಿ
ಆಕುಲ ಸಮೂಹ
ಆಖ್ಯಾತಿಸು ಹೇಳು
ಆರ್ತರು ದುಃಖಿತರು
ಆಯುತ ಹತ್ತುಸಾವಿರ
ಆಲಿ ಕಣ್ಣು
ಆಸರ ಆಯಾಸ
ಆಹವ ಕಾಳಗ, ಯುದ್ಧ
ಆಳಿಯರು ಗೆಳತಿಯರು, ಸಖಿಯರು
ಆಳ್+ತೋಱಿ(ಆಳ್ದೋಱಿ) = ಶೌರ್ಯತೋಱಿಸಿ
ಇಂದ್ರಜ ಅರ್ಜುನ
ಇರ್ಕೆ ಸ್ಥಳ, ತಾಣ
ಇಟ್ಟಿ(ಯಷ್ಟಿ) ಈಟಿ, ಭಾಲಿ
ಇಟ್ಟಣಿಸು ಕೂಡು, ಗುಂಪಾಗು
ಇಡಿ ತುಂಬು
ಇನ-ಶಶಿ ಸೂರ್ಯ-ಚಂದ್ರ
ಇಭಪುರ ಹಸ್ತಿನಾಪುರ
ಇರುಬೆ ತಿವಿತ
ಉಗಿದ ಬಿಚ್ಚಿದ
ಉಚ್ಚಳಿಸು ಒಳಹೊಕ್ಕು ಹೊರಬರು
ಉತ್ತಮಾಂಗ ತಲೆ
ಉತ್ತರಿಸು ದಾಟು
ಉದ್-ವೃತ ಉದ್ಧಟತನ, ಸೊಕ್ಕು
ಉದ್ಯಾಪನ ವ್ರತಪೂರ್ತಿ, ವಿಧಾನ

ಉನ್ನಿಸು ಊಹಿಸು
ಉಪಕಂಠ ಸಮೀಪ
ಉಪಲ ಕಲ್ಲು
ಉಪಹತಿ ನಾಶ, ಮರಣ
ಉಪಾಸ್ತಿ ಔಪಾಸನ
ಉಮ್ಮಳಿಸು ಆತುರಗೊಳ್ಳು
ಉರು ಉಗ್ರ, ಕಠಿಣ
ಉರುಬೆ ವೇಗ, ಉಗ್ರತೆ
ಉಲ್-ಉದಕ ಬೆಚ್ಚಗಿನ ನೀರು
ಉರ್ವರೆ ಭೂಮಿ
ಉರ್ವಮಂತ್ರ ಮಹತ್ವದ ಆಲೋಚನೆ
ಉಷ್ಟ್ರ ಒಂಟೆ
ಊಡಿಸು ಉಣಿಸು
ಎಡಹಿ ತಪ್ಪಿ
ಎಡೆಯಾಟ ಬರಹೋಗುವಿಕೆ
ಎರಕೆ ರೆಕ್ಕೆ
ಎಳತಟ ಎಳೆದಾಟ
ಏಕಾರ್ಥ ಒಂದೇ ವಸ್ತು
ಐಕಿಲ್ ಮಂಜು, ಹಿಮ
ಐದು ಬರು (ಐದಿ ಬಂದು)
ಐದೆ ಚೆನ್ನಾಗಿ
ಒಗ್ಗಾಗಿ ಗುಂಪಾಗಿ
ಒಗುವ ಸುರಿಯುತ್ತಿರುವ
ಒಚ್ಚ ಸ್ವಚ್ಛ
ಒಚ್ಚೇರಗಣ್ಣು ಬೊಗಸೆಗಣ್ಣು
ಒಡರ್ಚು ಒಳಹೊಗು
ಒಪ್ಪಿಡಿ ಒಂದು ಹಿಡಿ
ಒರಸು ಹೋಗಲಾಡಿಸು
ಒರೆ ಕವಚ
ಒಸಗೆ ಉತ್ಸವ
ಒಳ್ಪು ಸೊಗಸು
ಓಪರು ಪ್ರಿಯರು, ನಲ್ಲರು
ಓವು ಕಾಪಾಡು
ಓಸರಿಸು ಹಿಂಜರಿಯು
ಕಂಚುಕ ಶಿಲ್ಲೆಯ ಸೆರಗು
ಕಜ್ಜ ಕಾರ್ಯ
ಕಟ್ಟೆಸಕ ಅತಿಶೋಭೆ
ಕಡವರ ಹೊನ್ನು, ಬಂಗಾರ
ಕಡಿಕ ಕಟುಕ, ಕೊಲ್ಲುವವ
ಕ್ವಣಿತ ಧ್ವನಿ, ಸಪ್ಪಳ
ಕದಪು ಗಲ್ಲ
ಕರ್ದಮ ಕೆಸರು
ಕಬರಿ ಮುಡಿ, ತುರುಬು
ಕಂಬು ಶಂಖ
ಕರುಬನು ಮತ್ಸರವನ್ನು
ಕರುಬರು ಮತ್ಸರಿಗಳು, ಹೊಟ್ಟೆ-ಕಿಚ್ಚುಳ್ಳವರು
ಕಳಕಳಿಸು ತಳತಳಿಸು
ಕಳಭ ಆನೆಯ ಮರಿ
ಕಳಿವರಿವ ಸುಡುಸುಡುವ
ಕಳೆ ಅಂಶ, ೧/೧೬
ಕಳೆದುಳಿದ ಹರೆಯದ
ಕಾಯಜ ಮದನ, ಅಂಗಜ
ಕಾಂಚಿ ಪಟ್ಟಣದ ಹೆಸರು
ಕಾಂಚೀ ಪ್ರದೇಶ ನಡುಭಾಗ, ಕಟಿ-ಪ್ರದೇಶ
ಕಾತುದು ಕಾಯಿ ಬಿಟ್ಟಿತು
ಕಾಪುರುಷರು ನೀಚರು
ಕೀರ ಗಿಳಿ

ಕುಜವಂಶ ದುಷ್ಟಕುಲ
ಕುಟ್ಮಲ ಮೊಗ್ಗೆ
ಕುಪಣ ಹೆಣ
ಕುಂತಳ ಕೂದಲ
ಕುತ್ತುರ್ ಪೊದೆ, ಹೊದರು
ಕುಂಭಸ್ಥಳ ಗಂಡಸ್ಥಳ
ಕುಂಭಿಣಿ ಭೂಮಿ
ಕುರುಪು ಗುರುತು
ಕುರಂಗ ಚಿಗರಿ
ಕುಲಿ ವಜ್ರ
ಕೂರ್ದಸಿ(ಕೂರ್+ಅಸಿ)=ಮೊನೆಯಾದ ಕತ್ತಿ
ಕೂಪರು ಪ್ರಿಯಜನರು
ಕೂಲ ತಟ
ಕೇಕಿ ನವಿಲು
ಕೇಳೀವನ ಆಟದ ತೋಟ, ಕ್ರೀಡೋದ್ಯಾನ
ಕೊಂಚೆ ಕ್ರೌಂಚ
ಕೊಡವೆ ಧರ್ಮಶಾಲೆ
ಕೋಕಿ ಚಕ್ರವಾಕ
ಕೋಕನದ ಕೆಂದಾವರೆ
ಗಡಣ ಸಮೂಹ
ಗಣಕರು ಲೆಕ್ಕಿಗರು, ಕರಣಿಕರು
ಗಣಿಕೆ ಸೂಳೆ, ವೇಶ್ಯೆ
ಗರ್ತ ತಗ್ಗು
ಗನ್ನಗತಕ ಕೃತಕ, ಕಪಟ
ಗಬ್ಬಿ (ಗರ್ವಿ) ಪ್ರಬಲ
ಗಸಣಿ ಕಷ್ಟ, ಘರ್ಷಣ
ಗಳ ಕುತ್ತಿಗೆ, ಕೊರಳು
ಗೀರ್ವಾಣಪತಿ ಇಂದ್ರ, ದೇವತೆಗಳ ಒಡೆಯ
ಗಾಡಿ ಸೊಬಗು, ಸುಭಗತೆ
ಗುಡ ಬೆಲ್ಲ
ಗೋಳಕ ದುಂಡು, ಗುಂಡು
ಗೃಷ್ಟಿ ಒಂದೇ ಕರವುಳ್ಳ ಆಕಳು
ಘಾತಾಳಿಕೆ ಮೋಸ
ಚದುರು ಚತುರತೆ, ಜಾಣ್ಮೆ
ಚಮರಿ ಚೌರಿ, ಚಾಮರ
ಚಲ+ಅಪಾಂಗ ಚಂಚಲವಾದ ಕುಡಿನೋಟ
ಚಷಕ ಮದ್ಯಪಾನಪಾತ್ರೆ
ಚಾಮೀಕರ ಹೊನ್ನು
ಚಿತ್ರಭಾನು ಬೆಂಕಿ, ಅಗ್ನಿ
ಚೂತ ಮಾವು
ಚೆಚ್ಚರ ಬೇಗ
ಜಂಭಾರಿ ಇಂದ್ರ
ಜವಗಡಿಸು ಕಡಿಮೆಮಾಡು
ಜಸ ಪ್ರೀತಿ
ಜಾಗರ ಹರಿಸ್ಮರಣೆ ಕೀರ್ತನೆಗಾಗಿ ಏಕಾದಶಿ ದಿವಸ ರಾತ್ರಿ ಎಚ್ಚರಿರುವ ವಿಧಾನ
ತಡಿ ತೀರ, ದಂಡೆ
ತಣ್ಣಸ ತಂಪು
ತತ್ತಳ ತಳಮಳ
ತತಿ ಸಮೂಹ
ತಮಾಲ ಹೊಂಗೆ
ತಲ್ಪ ಹಾಸುಗೆ
ತವಿಸು ಕಡಿಮೆಮಾಡು

ತೆಳವು ತಡಮಾಡು
ತೆಳುವು ನೂಕು
ತಾವಡಿ ಸರ, ಮಾಲೆ
ತಿಣ್ಣ ಭಾರ
ತಿಗುರಿ ಹಚ್ಚಿ, ತೀಡಿ
ತ್ರಿವಳಿ=ಹೊಟ್ಟೆಯಮೇಲಿನ ಮೂರು ಗೆರೆಗಳು, ಸೌಂದರ್ಯ ರೇಖೆಗಳು
ತೀಡು ಬೀಸು
ತುಕ್ಕು ಮುತ್ತು, ಮುಕುರು
ತುಡುಕು ಹಿಡಿ
ತುತ್ತಿಸಿದ ನುಂಗಿದ
ತುರುಗಲ ಸಮೂಹ
ತುಳುಕಾಡು ಹೊರಸೂಸು
**ದ**ಧಿ ಮೊಸರು
ದರ್ಪಕ ಮನ್ಮಥ
ದರಹಾಸ ಎಳೆನಗು, ಮಂದಸ್ಮಿತೆ
ದಳ ಚಿಗುರೆಲೆ
ದಾತಾರ ಕೊಡುವನ, ಒಡೆಯ
ದಾಯ ದಾನ
ದ್ವಿರದ ಆನೆ
ದಿವ ಸ್ವರ್ಗ
ದಿವಿಜಪಥ ಆಕಾಶ
ದೀಂಟೆಗುಳಿ ಹಳ್ಳಕೊಳ್ಳ
ದೂರ್ವಾ ಕರಿಕೆ, ಗರಿಕೆ
ದೇವಾಂಗ ಬಟ್ಟೆ
ದೇಸಿಗ ದಿಕ್ಕಿಲ್ಲದ
**ಧಾ**ತ್ರಿ ದಾದಿ, ತೊತ್ತು
**ನ**ಕ್ರ ಮೊಸಳೆ
ನಕಿಲ್ಬಿಷ ಹೊಲಸಿಲ್ಲದ

ನಂಜು ವಿಷ
ನಲಗು ಮುದುಡು, ಕ್ಷೀಣವಾಗು
ನಾಡವಳಿತ ದೇಶದಾಡಳಿತ
ನಿಗಳ ಬೇಡಿ, ಬಂಧಿಸುವ ಸರಪಳಿ
ನಿಧಾನ ನಿಕ್ಷೇಪ, ಹೂಳಿಟ್ಟ ಹಣ
ನಿರ್ಮೋಕ ಹಾವಿನ ಪರೆ
ನಿರ್ಯಾಸ ರಸ, ನೀರು
ನಿಯೋಗ ಆಜ್ಞೆ, ಅಪ್ಪಣೆ
ನಿಯೋಗಿ ರಾಯಭಾರಿ
ನಿರವದ್ಯ ದೋಷರಹಿತ
ನಿರಾಲಂಬ ಆಶ್ರಯವಿಲ್ಲದ
ನಿವಾಳಿಸು ದೃಷ್ಟಿತೆಗೆ
ನಿಷ್ಕ ಬಂಗಾರದ ನಾಣ್ಯ
ನೀಲಾಳಕಿ ಕಪ್ಪು ಕೂದಲುಳ್ಳವಳು
ನುಂಪು ನುಣುಪು
ನೆರೆ ಮರ್ಮ, ಸಮೀಪದಲ್ಲಿರುವದು
ನೇಲ್ವ ಜೋತಾಡುವ
ನೇಸರ್ ಸೂರ್ಯ
ನೋಂಪಿ ವ್ರತ
**ಪ್ರ**ಕರ ಸಮೂಹ, ಗುಂಪು
ಪಚ್ಚಳ ಪಕ್ಕೆ
ಪಡೆ ಸೈನ್ಯ
ಪತ್ತು ವಿಧ ಸುತರು= ೧) ಔರಸ ೨) ದತ್ತ ೩) ಕ್ಷೇತ್ರಜ ೪) ಮಗಳ ಮಗ ೫) ಕಾನೀನ ೬) ಗೂಢ ೭) ಸ್ವಯಂದತ್ತ ೮) ಪ್ರೀತ ೯) ಪಾಲಿತ ೧೦) ಅಪವಿದ್ಧ
ಪ್ರತತಿ ಸಮೂಹ
ಪದ್ಮಾಕ್ಷ ಕಮಲದ ಮಣಿ

ಪದುಳ ಹತ್ತಿರ
ಪರಪುಟ್ಟ ಎರಡನೆಯವರಿಂದ ಪೋಷಿತ
ಪರಾಕಾದಡೆ ಕೇಳಲು ಅವಕಾಶವಾದರೆ
ಪರಿಘ ಅಗಳ್ತೆ
ಪಲ್ಲಟ ವ್ಯತ್ಯಾಸ
ಪವಡಿಸು ಮಲಗು
ಪ್ಲವಗ ಕಪಿ
ಪ್ರವಾಳ ಚಿಗುರು
ಪ್ರಸಂಗ ಕೀರ್ತನೆ, ಯಕ್ಷಗಾನ ಪ್ರಸಂಗ
ಪ್ರಸೂನ ಹೂ
ಪಂಣು ಹೂಡು
ಪಾಥೇಯ ದಾರಿಯ ಬುತ್ತಿ
ಪೀಯೂಷ ಅಮೃತ
ಪುಂಡ್ರ ನಾಮ, ಹೆಸರು
ಪುರಹೂತ ಇಂದ್ರ
ಪುಳಿನ ಉಸುಕು
ಪುಳಿಂದಿಯರು ಬೇಡರ ಹೆಂಗಸರು
ಪೆರ್+ಮಡು ದೊಡ್ಡ ಮಡುವು
ಪೊಣ್ಮು ಉಂಟಾಗು
ಪೊರಿಗೆ ಬಳಿಗೆ
ಪೊರೆಯೇರು ಹರುಷಿಸು
ಬರುಹಿ ನವಿಲು
ಬಳುವಳಿ ಮದುವೆಯಲ್ಲಿ ಕೊಡತಕ್ಕ ಉಡುಗೊರೆ
ಬಾಣಸಿಗ ಅಡುಗೆಯವ

ಬಾನೆ ಹೊಟ್ಟೆಯಮೇಲಿನ ಕೂದಲಿನ ಸಣ್ಣ ಸಾಲು
ಬಾಂದಳ ಆಕಾಶ
ಬಾಳ್ ಖಡ್ಗ
ಬಿಜ್ಜಣ ಬೀಸಣಿಕೆ
ಬಿತ್ತರದ ವಿಸ್ತಾರವಾದ
ಬಿನದ ವಿನೋದ
ಬಿಸಜನಾಭ ಕಮಲನಾಭ, ವಿಷ್ಣು
ಬೆಳಗಾಯಿ ಬೇಲದ ಕಾಯಿ
ಬೇಳಂಬ ಕೆಲಸ
ಬೈಚಿಡು ಅಡಗಿಸು
ಭಂಜಿಕ ಗೊಂಬೆ
ಭಂಜಿಸು ನಾಶಗೊಳಿಸು
ಭ್ರಮರಾರಿ ಸಂಪಿಗೆ
ಭಾಸುರ ಮನೋಹರವಾದ
ಭುಲ್ಲವಿಸು ಮರುಳುಮಾಡು
ಭ್ರೂ ಹುಬ್ಬು
ಭೇಷಜ ಔಷಧ
ಮಕರಪತ್ರ ಗಲ್ಲದಮೇಲೆ ಬರೆದ ಕೋಲ್ಕದ ಚಿತ್ರ
ಮಖ ಯಜ್ಞ
ಮೃಗಯಾ ಬೇಟೆ
ಮಂಜರ ಬೆಕ್ಕು
ಮಂಜು ಮನೋಹರವಾದ
ಮಡ ಹಿಮ್ಮಡ
ಮಡಲಿಸು ಹಬ್ಬು
ಮಂಡನ ಅಲಂಕಾರ ಮಾಡುವಿಕೆ
ಮಧುಪರ್ಕ ವರಪೂಜೆ

ಮನ್ನೆಯರು ರಾಜರು, ದೊರೆಗಳು
ಮರ್ಮರ ಮರಮರ
ಮರುಳ ದೆವ್ವ, ಭೂತ
ಮೃಷೆ ಸುಳ್ಳು ಕಲ್ಪನೆ
ಮಲಯಜ ಗಂಧ
ಮಲಿವ ಎದುರಿಸುವ
ಮಾಗಿ ಚಳಿ
ಮಾಡ ಉಪ್ಪರಿಗೆ
ಮಾಣಿಸು ಹೋಗಲಾಡಿಸು
ಮಾಸದ ಹೊಲಸಾಗದ
ಮಿಂಡೆ ತಾರುಣ್ಯಪ್ರಸ್ಥೆ
ಮುಕ್ತಾಳಿ ಮುತ್ತಿನ ರಾಶಿ
ಮುಗುಳ್ ಅಂಬು
ಮೂರಂಬಕ ಮುಕ್ಕಣ್ಣ, ಶಿವ
ಮೆಲ್ವಾಸು ಮೆತ್ತನ್ನ ಹಾಸುಗೆ
ಮೇಲುದಿ ಸೆರಗು
ಮೊಗಸು ಪರಿಹೋಗು
ಮೊಳೆ ಹುಟ್ಟು
ಮೊಳೆಗಾಣಿಸು ಮಾಡಿಸು
ಮೇಖಲೆ ಉಡುದಾರ, ನಡುಕಟ್ಟು
ಮೋಹರ ಸೈನ್ಯ, ದಂಡು
ರಜ್ಜು ಹಗ್ಗ
ರಸಾಲ ಮಾವು
ರಾಜಿ ಸಮೂಹ
ರುಚಿ ಕಿರಣ
ರುಜುವಾದ ಸರಳವಾದ, ಸಹಜವಾದ
ರುಜೆ ಜಡ್ಡು, ಬೇನೆ
ರುಧಿರ ರಕ್ತ, ನೆತ್ತರು

ರೂಢಿ ಸಾಮಾನ್ಯ
ರೋಲಂಬ ಭ್ರಮರ
ಲಾಜಾ ಭತ್ತದರಳು
ಲಾಂಛನ ಚಿನ್ಹ, ಗುರುತು
ಲುಬ್ಧಕ ಜೇಡರಪ, ಲೋಭಿ
ವೃತ್ತ ವರ್ತುಳ, ದುಂಡನ್ನ
ವರುಷ ವೃಷ್ಟಿ, ಮಳೆ
ವ್ಯಾಕೀರ್ಣ ವ್ಯಾಪ್ತವಾದ
ವಾಯಸ ಕಾಗೆ
ವ್ಯಾಳ ಹಾವು, ಸರ್ಪ
ವ್ಯಾಳಶಾಯಿ ಶೇಷಶಾಯಿ
ವಿಡಾಯ ವೈಖರಿ, ಬೆಡಗು
ವಿಸಟಂಬರ ಹಬ್ಬು
ವೀಚಿ ಅಲೆ, ತೆರೆ
ವೇದಿ ಜಗುಲಿ
ವೃಂದಾರಕರು ದೇವತೆಗಳು
ಶಕಟ ಬಂಡಿ
ಶಶಾಂಕ ಚಂದ್ರ
ಶಾತಕುಂಭ ಚಿನ್ನ
ಶಿಖರಿ ಮೊನೆಯಾದ, ಹರಿತಾದ
ಶೀತಳಮರೀಚಿ ಚಂದ್ರ
ಶಿರಃಪ್ರಧಾನ ಮುಖ್ಯಮಂತ್ರಿ
ಶೈವಾಲ ಹಾವಸೆ
ಷಂಡ ಸಮೂಹ
ಕ್ಷತ ಗಾಯ
ಸಗ್ಗಳೆ ಬತ್ತಳಿಕೆ, ತೊಗಲಿನ ಚೀಲ
ಸಮನಿಸು ಒದಗು, ಪ್ರಾಪ್ತವಾಗು
ಸರಳ್ ಬಾಣ
ಸಲ್ವು ಸೇರು

ಸಾರ್ಚು ಹೊಗಿಸು

ಸ್ವಾದನ ತಿನಿಸು

ಸಾಮಜೋಲ್ಲಾಸ ಸಾಮ-ಗಾನೋಲ್ಲಾಸ

ಸಾಯಕ ಬಾಣ

ಸಿಂಗಾಡಿ ಬಾಣ

ಸಿತವಾಹನ ಅರ್ಜುನ

ಸಿದ್ಧಾಯ ಗೊತ್ತುಪಡಿಸಿದ ಕಪ್ಪ-ಕಾಣಿಕೆ

ಸುತ್ರಾಮ ಇಂದ್ರ

ಸು+ಧಿ ಒಳ್ಳೆಯ ಬುದ್ಧಿ

ಸುಧೌತ ಚೆನ್ನಾಗಿ ಒಗೆದ

ಸುಯಿಧಾನ ರಕ್ಷಣೆ, ಕಾವಲು

ಸೂಡು (ಸೂಳು) ಧರಿಸು

ಸೆಡೆದ ಡೊಂಕಾದ

ಸೇಸೆ ಅಕ್ಷತೆ

ಸೈಪಿಡು ಸಂತೈಸು

ಸೊಡರ್ ದೀಪ

ಸೊವಡು (ಸೊಗಡು) ಸುದೋದಕ

ಸೋವು ಕತ್ತರಿಸು, ಕಡಿ, ಸವರು

ಸಂಘಾತ ಗುಂಪು, ಹಿಂಡು

ಸಂಛಾದಿತ ಮುಚ್ಚಿದ

ಸಂತರ್ಪಣ ಭೋಜನ

ಸಂಭಾವಿಸು ಆದರಾತಿಥ್ಯ ಮಾಡು

ಹರಿವಾಸ ವಿಷ್ಣುವಿನ ವ್ರತದಿವಸ, ಏಕಾದಶಿ

ಹರಿದ್ರಾ ಅರಿಶಿಣ

ಹರಿಪದ ವಿಷ್ಣುವಿನ ಪಾದ. ಆಕಾಶ

ಹೃಷ್ಟ ಸಂತುಷ್ಟ

ಹರಿತರು ಓಡಿಬರು

ಹಾಸು ಕೊರಳಪಟ್ಟಿ, ಪಾಶ

ಹಿಳಿದು ನಿರ್ದಯತೆಯಿಂದ ಸಿಳಿದು

ಹೆಕ್ಕಳಿಸು ಪ್ರೀತಿಸು

ಹೊಡಕರಿಸು=ತಲೆದೋರು, ಹೆಚ್ಚಾಗು

ಹೊನಲು ಹೊಳೆ, ನದಿ

ಹೊಳವು ಕಾಂತಿ

